KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೩ | ಬೆಂಗಳೂರು, ಗುರುವಾರ ಮಾರ್ಚ್ ೨೭, ೨೦೦೮ (ಚೈತ್ರ ೭, ಶಕ ವರ್ಷ ೧೯೨೯) | ಸಂಚಿಕೆ ೧೩ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯಃ** ಶ್ರೀಮತಿ ಡಾಃ ಕೆ. ಸುಂದರಮ್ಮ, ನಿವೃತ್ತ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ ರವರಿಗೆ ದಂಡನೆ ವಿಧಿಸಿದ ಆದೇಶದ ವಿರುದ್ದ ಗೌರವಾನ್ವಿತ ರಾಜ್ಯಪಾಲರಿಗೆ ಮೇಲ್ಮನವಿ ಸಲ್ಲಿಸಿದ ಕುರಿತು ಹಾಗೂ ಮೇಲ್ಮನವಿಯನ್ನು ವಜಾ ಮಾಡಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಃ ಸಿಆಸುಇ 74 ಎಸ್‌ಇಎನ್ 02 ದಿಃ23-05-05.
2. ಸರ್ಕಾರಿ ಆದೇಶ ಸಂಃ ಸಿಆಸುಇ 74 ಎಸ್‌ಇಎನ್ 02 ದಿಃ23-01-07.
3. ಸರ್ಕಾರಿ ಆದೇಶ ಸಂಃ ಸಿಆಸುಇ 74 ಎಸ್‌ಇಎನ್ 02 ದಿಃ17-05-07.
4. ಡಾಃ ಕೆ. ಸುಂದರಮ್ಮ ಇವರ ದಿಃ 20-02-2007ರ ಮೇಲ್ಮನವಿ.

**ಪ್ರಸ್ತಾವನೆಃ**

ಬೀದರ್ ಜಿಲ್ಲಾ ಪಂಚಾಯತ್‌ನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಅನುಮೋದಿಸಲ್ಪಟ್ಟ ಪಟ್ಟಿಯಲಿಲ್ಲದ ಇಲಾಖೆಗೆ ಉಪಯೋಗಕ್ಕೆ ಬಾರದ ಹಾಗೂ ಔಷಧವಲ್ಲದ Amcrylae and Bio Adhesive ಎಂಬ ರಾಸಾಯಿನಕವನ್ನು ಖರೀದಿಸುವ ಮೂಲಕ ಸರ್ಕಾರಕ್ಕೆ ಲಕ್ಷಾಂತರ ರೂಪಾಯಿಗಳ ನಷ್ಟವುಂಟು ಮಾಡಿ ತೀವ್ರ ದುರ್ನಡತೆ ಎಸಗಿದ ಆರೋಪಗಳಿಗಾಗಿ ಈ ಕೆಳಕಂಡ ಅಧಿಕಾರಿ/ನೌಕರರುಗಳ ವಿರುದ್ದ ಜಂಟಿ ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಪಡೆಯಲಾಯಿತು.

1. ಶ್ರೀ ವೈ. ಸದಾಶಿವ್, ನಿವೃತ್ತ ಕೆ.ಎ.ಎಸ್ ಅಧಿಕಾರಿ
2. ಶ್ರೀಮತಿ ಡಾಃ ಕೆ. ಸುಂದರಮ್ಮ ನಿವೃತ್ತ ಡಿ.ಹೆಚ್.ಓ.
3. ಶ್ರೀ ರವಿಕುಮಾರ್ ಕಮಲಾಪುರ್‌ಕರ್ ಮುಖ್ಯ ಲೆಕ್ಕಾಧಿಕಾರಿ
4. ಶ್ರೀ ಸೈಯದ್ ಸತ್ತಾರ್, ನಿವೃತ್ತ ಪತ್ರಾಂಕಿತ ಸಹಾಯಕರು
5. ಶ್ರೀ ವಿಶ್ವನಾಥ್, ಪ್ರಥಮ ದರ್ಜೆ ಸಹಾಯಕರು
6. ಶ್ರೀ ಮಾಚಕಲ್ಲಪ್ಪ ಪ್ರಥಮ ದರ್ಜೆ ಸಹಾಯಕರು.

ವಿಚಾರಣಾ ವರದಿಯನ್ನು ಪರಿಶೀಲಿಸಿ ಅದನ್ನು ಒಪ್ಪಿಕೊಂಡ ಸರ್ಕಾರವು ಮೇಲೆ ಓದಲಾದ(1)ರ ದಿಃ23-05-05ರ ಸರ್ಕಾರದ ಆದೇಶದಲ್ಲಿ ಸೇವೆಯಲ್ಲಿರುವ ಶ್ರೀ ರವಿಕುಮಾರ್ ಕಮಲಾಪುರ್‌ಕರ್, ಶ್ರೀ ವಿಶ್ವನಾಥ್ ಮತ್ತು ಶ್ರೀ ಮಾಚಕಲ್ಲಪ್ಪ ಅವರುಗಳಿಗೆ ಸಂಬಂಧಿಸಿದಂತೆ ಅವರುಗಳ ಮೇಲಿನ ಆರೋಪಗಳಿಂದ ಆರೋಪಮುಕ್ತರನ್ನಾಗಿಸಿ ಆದೇಶ ಹೊರಡಿಸಲಾಯಿತು. ಮೇಲೆ ಓದಲಾದ(2)ರ ದಿಃ23-1-07ರ ಸರ್ಕಾರಿ ಆದೇಶದಲ್ಲಿ ಶ್ರೀ ವೈ. ಸದಾಶಿವ್, ಶ್ರೀಮತಿ ಡಾಃ ಕೆ ಸುಂದರಮ್ಮ ಮತ್ತು ಶ್ರೀ. ಸೈಯದ್ ಸತ್ತಾರ್ ಅವರುಗಳ ನಿವೃತ್ತಿ ಸೌಲಭ್ಯಗಳಿಂದ ಆಗಿರುವ ನಷ್ಟದ ರೂಃ18.82ಲಕ್ಷಗಳ ಪೈಕಿ ಅವರುಗಳ ಪಾಲಿನ ತಲಾ ರೂಃ3,13,666.67/- ಗಳನ್ನು ವಸೂಲಿ

ಮಾಡಲು ಹಾಗೂ ಅವರುಗಳ ಮಾಸಿಕ ವಿಶ್ರಾಂತಿ ವೇತನದಿಂದ ರೂ:1,000/- ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ 5 ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲಾಯಿತು. ತದನಂತರ ಶ್ರೀ ರವಿಕುಮಾರ್ ಕಮಲಾಪುರ್‌ಕರ್, ಶ್ರೀ ವಿಶ್ವನಾಥ್ ಮತ್ತು ಶ್ರೀ ಮಾಚಕಲ್ಲಪ್ಪ ಅವರುಗಳಿಗೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ವಸೂಲಿ ಮಾಡಲು ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಾವಳಿ 1957ರ ನಿಯಮ 26ರನ್ವಯ ಪರಾಮರ್ಶಿಸಲು ಕೈಗೆತ್ತಿಗೊಂಡು ಮೇಲೆ ಓದಲಾದ (3)ರ ದಿಃ17-5-07 ರ ಆದೇಶದಲ್ಲಿ ಶ್ರೀ ರವಿಕುಮಾರ್ ಕಮಲಾಪುರ್‌ಕರ್, ಶ್ರೀ ವಿಶ್ವನಾಥ್ ಮತ್ತು ಶ್ರೀ ಮಾಚಕಲ್ಲಪ್ಪ ಅವರುಗಳಿಂದ ಸರ್ಕಾರಕ್ಕೆ ಆಗಿರುವ ವೆಚ್ಚದ ಮೊತ್ತ ರೂ:18.82ಲಕ್ಷಗಳ ಪೈಕಿ ಅವರುಗಳ ಪಾಲಿನ ರೂ:3,13,666.67/- ಗಳನ್ನು ವಸೂಲು ಮಾಡಲು ಆದೇಶ ಹೊರಡಿಸಲಾಯಿತು.

ಈ ಬಗ್ಗೆ ಮೇಲ್ಕಂಡ ಅಧಿಕಾರೀ:ನೌಕರರುಗಳ ಪೈಕಿ ಡಾ: ಕೆ. ಸುಂದರಮ್ಮ ನಿವೃತ್ತ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ ರವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 18ರನ್ವಯ ಗೌರವಾನ್ವಿತ ರಾಜ್ಯಪಾಲರಿಗೆ ಮೇಲೆ (2) ರಲ್ಲಿ ಓದಲಾದ ಮೇಲ್ಮನವಿ ಸಲ್ಲಿಸಿರುತ್ತಾರೆ. ಅವರು ಸಲ್ಲಿಸಿರುವ ಮೇಲ್ಕಂಡ ಮನವಿಯಲ್ಲಿ ತಮ್ಮ ಮೇಲೆ ವಿಧಿಸಿರುವ ದಂಡನೆಯನ್ನು ರದ್ದುಗೊಳಿಸಲು ಕೋರಿದ್ದಾರೆ.

ಡಾ: ಕೆ. ಸುಂದರಮ್ಮ ನಿವೃತ್ತ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ ರವರು ಸಲ್ಲಿಸಿರುವ ಮೇಲ್ಮನವಿ ಮತ್ತು ತತ್ಸಂಬಂಧ ಪರಿಶೀಲನಾ ಟಿಪ್ಪಣಿ ಈ ಕೆಳಕಂಡಂತಿರುತ್ತದೆ.

| ಮೇಲ್ಮನವಿ ಕಂಡಿಕೆ | ಷರಾ |
|---|---|
| 1. ವಿಚಾರಣಾ ವರದಿಯು ನಿಯಮಾನುಸಾರ ಇರುವುದಿಲ್ಲ: ಶಿಸ್ತು ಪ್ರಾಧಿಕಾರಿಯವರು ಪ್ರತ್ಯೇಕವಾಗಿ ಹತ್ತು ಆರೋಪಗಳನ್ನು ಮಾಡಿದ್ದು ಪ್ರತಿಯೊಂದು ಅರೋಪದ ಬಗ್ಗೆ ಅಪಾದಿತರು ವಿವರವಾದ ಲಿಖಿತ ವಾದಗಳನ್ನು ಮಂಡಿಸಿರುತ್ತಾರೆ. ವಿಚಾರಣಾಧಿಕಾರಿಯವರು ಪ್ರತಿಯೊಂದು ಆರೋಪದ ಬಗ್ಗೆ ಪ್ರತ್ಯೇಕವಾಗಿ ವಿಶ್ಲೇಷಣೆ ನಡೆಸದೆ ಎಲ್ಲಾ ಹತ್ತು ಆರೋಪಗಳನ್ನೂ ಸಂಯೋಜಿಸಿ ನಿರ್ಣಯ ನೀಡಿರುತ್ತಾರೆ. ಈ ರೀತಿ ಎಲ್ಲಾ ಆರೋಪಗಳ ಬಗ್ಗೆ ಒಟ್ಟಾಗಿ ನಿರ್ಣಯ ನೀಡಿರುವುದು ಕೆ.ಸಿ.ಎಸ್(ಸಿಸಿಎ) ನಿಯಮಗಳು,1957 11ನೆ ನಿಯಮದ (23)ನೇ ಉಪ-ನಿಯಮದ (i) (ಡಿ) ಖಂಡಕ್ಕೆ ವ್ಯತಿರಿಕ್ತವಾಗಿದೆ, ಏಕೆಂದರೆ ಸದರಿ ಖಂಡವು the repart shall contain the findings on each article of charge and the reasons therefore ಎಂದು ಉಪಬಂಧ ಹೊಂದಿದೆ. ಪ್ರತಿಯೊಂದು ಆರೋಪದ ಬಗ್ಗೆ ಪ್ರತ್ಯೇಕ ಕಾರಣಗಳನ್ನು ದಾಖಲಿಸದೇ ಇರುವುದರಿಂದ ವಿಚಾರಣಾ ವರದಿಯು ನಿಯಮ11(23)(i)(ಡಿ)ಗೆ ವ್ಯತಿರಿಕ್ತವಾಗಿದೆ. | It is denied that the Disciplinary Authority has not considered the explanation offered by the appellant before imposing penalty.<br>The Enquiry Officer has reported that though there are separate charges against all the AGO s since these changes are commonly applicable and having bearing with each other accused, he has taken up the issues jointly and inquired into. In view of the reasoning pf Enquiry Officer there is no violation of C.C.A Rules. |
| 2.ವಿಚಾರಣಾ ವರದಿಯಲ್ಲಿ ಪ್ರತಿಯೊಂದು ಆರೋಪದ ಬಗ್ಗೆ ಸಾಕ್ಷ್ಯಾಧಾರಗಳ ಮೌಲ್ಯಮಾಪನ ಇರುವುದಿಲ್ಲ:- ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರ 11ನೇ ನಿಯಮದ (23)ನೇ ಉಪ ನಿಯಮದ(i) (ಸಿ) ಖಂಡದ ಅನ್ವಯ a report shall be prepared and it shall contain an assessment of evidence in respect of each articles of charge ಎಂದಿದೆ. ಆದರೆ ಪ್ರಸ್ತುತ ವಿಚಾರಣಾ ವರದಿಯಲ್ಲಿ ಹತ್ತು ಆರೋಪಗಳ ಬಗ್ಗೆ ಪ್ರತ್ಯೇಕವಾಗಿ ಸಾಕ್ಷ್ಯಾಧಾರಗಳ ವಿಶ್ಲೇಷಣೆ ಮಾಡಿರುವುದಿಲ್ಲ. ಆದ್ದರಿಂದ ವಿಚಾರಣಾ ವರದಿಯು ನಿಯಮಗಳಿಗೆ ವ್ಯತಿರಿಕ್ತವಾಗಿದೆ ಹಾಗೂ ಪ್ರತಿಯೊಂದು ಆರೋಪದ ಬಗ್ಗೆ ಸಾಕ್ಷ್ಯಾಧಾರಗಳ ವಿಶ್ಲೇಷಣೆಯನ್ನು ಹೊಂದಿರುವುದಿಲ್ಲ. | The Enquiry Officer has deliberated in detail on all the charges. |
| 3(1)(i)ವಿಚಾರಣಾಧಿಕಾರಿಯವರು ಅಪಾದಿತರು ಮಂಡಿಸಿರುವ ಅಂಶಗಳನ್ನು ಪರಿಗಣಿಸಿರುವುದಿಲ್ಲ:- ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಒಂದನೇ ಅರೋಪದ ಬಗ್ಗೆ ನಮೂದಿಸಿರುವ | |

| | |
|---|---|
| ಅಂಶಗಳು,ಅಂದರೆ:- (i)ಸಾಕ್ಷಿದಾರರು ವಿಷಯದ ಬಗ್ಗೆ ಮಾಹಿತಿ ಹೊಂದಿರುವುದಿಲ್ಲ:- ಆರೋಪದ ಬಗ್ಗೆ ಡಾ: ಜೆ.ಎಸ್. ರಾಜು, ಜಂಟಿ ಯೋಜನಾಧಿಕಾರಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯ ಬೆಂಗಳೂರು ಇವರು ಶಿಸ್ತು ಪ್ರಾಧಿಕಾರಿಯ ಪರ ಸಾಕ್ಷಿ ನುಡಿದಿರುತ್ತಾರೆ.ಸದರಿ ಸಾಕ್ಷಿಯು ದಿ:1-7-04ರಿಂದ ಜಂಟಿ ಯೋಜನಾಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದು, ಡಾ: ಎಸ್.ಎಂ. ಜಂಗ್ಗೆ, ಯೋಜನಾ ನಿರ್ದೇಶಕರು ಸಲ್ಲಿಸಿರುವ ತನಿಖಾ ವರದಿ ನಿಶಾನೆ-ಪಿ-1ನ್ನು ಗುರುತಿಸಿ ಸಾಕ್ಷಿ ನುಡಿದಿದ್ದಾರೆ. ಇವರು ಪ್ರಕರಣದ ತನಿಖೆ ನಡೆಸದೆ ಇರುವುದಿರಿಂದ ಇವರಿಗೆ ವಿಷಯದ ಬಗ್ಗೆ ಪ್ರತ್ಯೇಕ ಮಾಹಿತಿ ಇರುವುದಿಲ್ಲ ಎಂದು ವಾದವನ್ನು ಮಂಡಿಸಿರುತ್ತಾರೆ. ವಿಚಾರಣಾ ವರದಿಯ ಪುಟ 8 ರಲ್ಲಿ ಈ ಬಗ್ಗೆ ವಿಚಾರಣಾಧಿಕಾರಿಯವರು ತಮ್ಮ ನಿರ್ಣಯ ನೀಡಿ ಒಂದೇ ಸಾಕ್ಷಿದಾರರು ತನಿಖಾಧಿಕಾರಿಯ ಸಹಿಯನ್ನು ಗುರುತಿಸಿದ್ದಾರೆ. ಆದರಿಂದ ಅವರು ಸಾಕ್ಷಿ ಹೇಳಲು ಸಕ್ಷಮರಾಗಿಲ್ಲ ಎಂದು ಹೇಳಲು ಬರುವುದಿಲ್ಲವೆಂದು ನಿರ್ಣಹಿಸಿದ್ದಾರೆ. ಕೇವಲ ಸಹಿಯನ್ನು ಗುರುತಿಸುವ ವ್ಯಕ್ತಿಯು ವಿಷಯದ ಬಗ್ಗೆ ಮಾಹಿತಿ ಹೊಂದಿರುವರು ಎಂದು ಹೇಳಲು ಬರುವುದಿಲ್ಲ. ತನಿಖಾ ಧಿಕಾರಿಯು ಅಪಾದಿತರ ಪಾಟೀ ಸವಾಲಿಗೆ ಉತ್ತರಿಸಿ ಆರೋಪಗಳನ್ನು ಸಾಬೀತುಪಡಿಸಬೇಕಾಗಿದೆ. ಈ ರೀತಿ ಮಾಡದೇ ಇರುವುದರಿಂದ ಪ್ರಸ್ತುತ ಪ್ರಕರಣದಲ್ಲಿ ಆರೋಪಗಳು ಸಾಬೀತಾಗುವುದಿಲ್ಲ. | The Enquiry Officer after considering the defence statement of the AGO has given the report. |
| 3(1)(iii-v)-iii- ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಔಷದಿಗೆ ಮುಖ ಬೆಲೆಯನ್ನೇ ನೀಡಲಾಗಿದೆ. ಹೆಚ್ಚಿನ ಮೊಬಲಗಳನ್ನು ನೀಡಿರುವುದಿಲ್ಲ:- 1ನೇ ಅರೋಪದಲ್ಲಿ ಆಪಾದಿಸಿರುವಂತೆ ಖರೀದಿಸಿರುವ ಔಷಧಿಗೆ ಸರಿಯಾದ ಬೆಲೆ ಅಂದರೆ ರೂ:275.50ನ್ನು ನೀಡಿ ಖರೀದಿಸಲಾಗಿದೆ. ಯಾವುದೇ ಹೆಚ್ಚಿನ ಮೊಬಲಗನ್ನು ನೀಡಿರುವುದಿಲ್ಲ ಎಂದು ತಿಳಿಸಿರುತ್ತಾರೆ.ವಿಚಾರಣಾ ವರದಿಯ 10ನೇ ಪುಟದಲ್ಲಿ ದರ ಪಟ್ಟಿ ಪಡೆದುಕೊಳ್ಳದೇ ಇರುವುದರಿಂದ ಸರ್ಕಾರಕ್ಕೆ ನಷ್ಟ ಉಂಟಾಗಿದೆ ಎಂದು ವಿಚಾರಣಾಧಿಕಾರಿಯವರು ನಮೂದಿಸಿದ್ದಾರೆ. ಅದರೆ ಕಡಿಮೆ ದರದ ಯಾವುದೇ ಸಂಸ್ದೆಯ ದರ ಪಟ್ಟಿಯನ್ನು ವಿಚಾರಣಾ ವೇಳೆಯಲ್ಲಿ ಹಾಜರು ಪಡಿಸಿರುವುದಿಲ್ಲವಾದರಿಂದ ವಿಚಾರಣಾಧಿಕಾರಿಯವರ ನಿರ್ಣಯವು ಏಕ ಪಕ್ಷೀಯವಾಗಿದೆ ಎನ್ನುವುದು ಸಾಬೀತಾಗುತ್ತದೆ.<br>(iv)ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಔಷದಿ ಖರೀದಿ ಆದೇಶವನ್ನು ಜಿಲ್ಲಾ ಪಂಚಾಯಿತಿಯ ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯ ಅನುಮೋನೆಯೊಂದಿಗೆ ಖರೀದಿಸಲಾಗಿದೆ:- ಆಪಾದಿತ ಅಧಿಕಾರಿಯು ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಔಷದಿಯನ್ನು ಖರೀದಿಸಿರುವುದಿಲ್ಲ. ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯಲ್ಲಿ ದಿ:25-2-02 ರಂದು ತೆಗೆದುಕೊಂಡ ನಿರ್ಣಯದನ್ವಯ ಖರೀದಿಸಲಾಗಿದೆ ಎಂದು ತಿಳಿಸಿರುತ್ತಾರೆ. ವಿಚಾರಣಾ ವರದಿಯ 9ನೇ ಪುಟದಲ್ಲಿ ಈ ಬಗ್ಗೆ ವಿಚಾರಣಾಧಿಕಾರಿಯವರು ನಮೂದಿಸಿ ನಿಶಾನೆ ಪಿ-2ರ 4ನೇ ಪುಟದ ಆದೇಶ ಸರಿಯಾಗಿ ಓದಲು ಬಾರದ ಪ್ರತಿ ಇರುತ್ತದೆ | |

| | |
|---|---|
| ಎಂದು ನಮೂದಿಸಿದ್ದಾರೆ. ಈ ರೀತಿ ಸರಿಯಾಗಿ ಓದಲು ಬಾರದ ಪ್ರತಿಯನ್ನು ಆಧಾರವಾಗಿಟ್ಟುಕೊಂಡು ಆರೋಪ ಸಾಬೀತಾಗಿದೆ ಎಂದು ನಮೂದಿಸಿರುವುದು ವಿಚಾರಣಾ ತತ್ವಗಳಿಗೆ ವ್ಯತಿರಿಕ್ತವಾಗಿದೆ.<br>(v) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಒಂದನೇ ಆರೋಪದ ಬಗ್ಗೆ 2ನೇ ಆಪಾದಿತ ಅಧಿಕಾರಿಯ ಸಮರ್ಥನೆ:- Amecrylate A Bio Adhesive ಇದನ್ನು ಖರೀದಿಸುವ ಪೂರ್ವದಲ್ಲಿ ದಿ: 25-2-02ರ ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯ ಸಭೆಯಲ್ಲಿ ವಿವರವಾಗಿ ಚರ್ಚಿಸಲಾಗಿದೆ.ಅನುದಾನದ ಬಗ್ಗೆ ಆರ್ಥಿಕ ಇಲಾಖೆಯಿಂದ ಅನುಮೋದನೆ ಪಡೆಯಲಾಗಿದೆ. ಆಡಳಿತಾತ್ಮಕ ಅನುಮೋದನೆಯು ದೊರೆತ ನಂತರ ಔಷಧಿಯನ್ನು ಖರೀದಿಸಿರುವ ಹಿನ್ನಲೆಯಲ್ಲಿ ಸರ್ಕಾರಕ್ಕೆ ಯಾವುದೇ ನಷ್ಟ ಉಂಟು ಮಾಡಿರುವುದಿಲ್ಲ. ಖರೀದಿಸಿರುವ ಔಷಧಿಗಳನ್ನು ಸಾರ್ವಜನಿಕರಿಗೆ ಬಳಸಲಾಗಿದೆ. ಆದ್ದರಿಂದ 1ನೇ ಆರೋಪವು ಸಾಬೀತಾಗಿಲ್ಲವೆಂದು ನಿರ್ಣಯಿಸಲು ಕೋರಲಾಗಿದೆ. ಎಂದು ತಿಳಿಸಿದ್ದಾರೆ. ಈ ವಾದದ ಅಂಶಗಳನ್ನು ವಿಚಾರಣಾಧಿಕಾರಿಯವರು ಪರಿಗಣಿಸದೆ ಏಕಪಕ್ಷೀಯವಾಗಿ ಆರೋಪ ಸಾಬೀತಾಗಿದೆ ಎಂದು ವರದಿಯನ್ನು ನೀಡಿರುತ್ತಾರೆ. | All these avertments have been considered and rejected by the Enquiry Officer. |
| 3(2)(i-iv)ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಎರಡನೇ ಆರೋಪದ ಬಗ್ಗೆ ನಮೂದಿಸಿರುವ ಅಂಶಗಳು ಅಂದರೆ:<br>(i) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಆರ್ಥಿಕ ಇಲಾಖೆಯ ಅನುಮೋದನೆಯೊಂದಿಗೆ ಮೊಬಲಗನ್ನು ವೆಚ್ಚ ಮಾಡಲಾಗಿದೆ: ನಿಶಾನೆ ಪಿ-4ರಲ್ಲಿ ಆರ್ಥಿಕ ಇಲಾಖೆಯ ಅನುಮೋದನೆಯನ್ನು ಪಡೆದು ಔಷದಿಯನ್ನು ಖರೀದಿಸಲಾಗಿದೆ.ಕೇಂದ್ರ ಸರ್ಕಾರದಿಂದ ಈ ಬಗ್ಗೆ ಮರುಪಾವತಿ ಕೋರಬಹುದು. ಇದು ಹೊಸ ಔಷಧಿಯಾದ್ದರಿಂದ ಜಿಲ್ಲಾ ಪಂಚಾಯಿತಿಯ ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯ ಅನುಮೋದನೆ ಪಡೆಯಲಾಗಿದೆ ಎಂದು ತಿಳಿಸಿರುತ್ತಾರೆ. ಇದನ್ನು ವಿಚಾರಣಾಧಿಕಾರಿಯವರು ತಮ್ಮ ವರದಿಯಲ್ಲಿ ಅಲ್ಲಗಳೆದಿರುವುದಿಲ್ಲ. ಆದ್ದರಿಂದ ವೆಚ್ಚವಾಗಿರುವ ಮೊಬಲಗನ್ನು ಕೇಂದ್ರ ಸರ್ಕಾರದಿಂದ ಭರಿಸಿಕೊಳ್ಳಬಹುದಾಗಿದೆ.<br>(ii) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಹೊಸ ಔಷಧಿಯನ್ನು ಖರೀದಿಸುವ ಪೂರ್ವದಲ್ಲಿ ವೆಚ್ಚ ಮರುಪಾವತಿಯ ಬಗ್ಗೆ ಜಿಲ್ಲಾ ಪಂಚಾಯತಿಯು ಪರಿಗಣಿಸಿರುವುದಿಲ್ಲ: ಹೊಸ ಔಷಧಿಯನ್ನು ಸಾರ್ವಜನಿಕರಿಗೆ ಉಪಯುಕ್ತವಾಗುವ ಹಿನ್ನಲೆಯಲ್ಲಿ ಖರೀದಿಸಲಾಗಿದೆ.ಆದರೆ ಈ ವೆಚ್ಚವನ್ನು ಕೇಂದ್ರ ಸರ್ಕಾರವು ಭರಿಸಬೇಕು ಎಂಬ ಚಿಂತನೆಯು ಜಿಲ್ಲಾ ಪಂಚಾಯಿತಿಯಲ್ಲಿ ಇರಲಿಲ್ಲ.ಈ ಹಿನ್ನಲೆಯಲ್ಲಿ ಮರುಪಾವತಿಯ ಅಂಶವನ್ನು ಮರೆಮಾಚುವ ಪ್ರಶ್ನೆ ಉದ್ಭವಿಸುವುದಿಲ್ಲ ಎಂದು ತಿಳಿಸಿರುತ್ತಾರೆ. ಈ ಅಂಶವನ್ನು ವಿಚಾರಣಾ ವರದಿಯಲ್ಲಿ ಉಲ್ಲೇಖಿಸಿ ವಿಶ್ಲೇಷಿಸಿ ವರದಿ ನೀಡಿರುವುದಿಲ್ಲ.<br>(iii) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಈ ಆರೋಪದ ಬಗ್ಗೆ ಸಾಕ್ಷಿದಾರರು ಪ್ರತ್ಯೇಕ ಸಾಕ್ಷಿ ನುಡಿದಿರುವುದಿಲ್ಲ: ಶಿಸ್ತು ಪ್ರಾಧಿಕಾರಿಯ ಪರ ಸಾಕ್ಷದಾರರಾದ ಡಾ: ಜಿ.ಎನ್. ರಾಜು ಇವರು ಈ ಆರೋಪದ ಬಗ್ಗೆ ಪ್ರತ್ಯೇಕವಾದ ಸಾಕ್ಷಿ ನುಡಿದಿರುವುದಿಲ್ಲ. | |

| | |
|---|---|
| ಆದ್ದರಿಂದ ಈ ಅರೋಪ ಸಾಬೀತಾಗಿರುವುದಿಲ್ಲವೆಂದು ಪರಿಗಣಿಸಲು ಕೋರಿದೆ. ಎಂದು ಮಂಡಿಸಿರುತ್ತಾರೆ. ವಿಚಾರಣಾಧಿಕಾರಿಯವರು ಈ ಅಂಶದ ಬಗ್ಗೆ ತಮ್ಮ ವರದಿಯಲ್ಲಿ ಉಲ್ಲೇಖಿಸಿ ವಿಶ್ಲೇಷಿಸಿ ವರದಿ ನೀಡಿರುವುದಿಲ್ಲ.<br>(iv)ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಎರಡನೇ ಆರೋಪದ ಬಗ್ಗೆ 2ನೇ ಆಪಾದತ ಅಧಿಕಾರಿಯ ಸಮರ್ಥನೆಃ ನಿಶಾನೆ ಪಿ-4ರಲ್ಲಿ ಸರ್ಕಾರದ ಅನುಮೋದನೆ ಪಡೆಯಲಾಗಿದ್ದು ದಿಃ25-2-02 ರ ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯ ಸಭೆಯಲ್ಲಿ ಅನುಮೋದನೆ ಪಡೆದ ನಂತರ ಔಷಧಿಯನ್ನು ಖರೀದಿಸಲಾಗಿದೆ. ಕೇಂದ್ರ ಪುರಸ್ಕೃತ ಯೋಜನೆಯಡಿ ಈ ವೆಚ್ಚವು ಮರು ಪಾವತಿ ಮಾಡುವ ಬಗ್ಗೆ ಜಿಲ್ಲಾ ಪಂಚಾಯಿತಿಯಿಂದ ಯಾವುದೇ ಪ್ರಸ್ತಾವನೆ ಇರುವುದಿಲ್ಲ. ಆದ್ದರಿಂದ ಈ ಅರೋಪ ಸಾಭೀತಾಗಿಲ್ಲವೆಂದು ಪರಿಗಣಿಸಲು ಕೋರಿದೆ ಎಂದು ತಿಳಿಸಿರುತ್ತಾರೆ. ವಿಚಾರಣಾಧಿಕಾರಿಯವರು ಈ ಅಂಶದ ಬಗ್ಗೆ ತಮ್ಮ ವರದಿಯಲ್ಲಿ ಉಲ್ಲೇಖಿಸಿ ವಿಶ್ಲೇಷಿಸಿ ವರದಿ ನೀಡಿರುವುದಿಲ್ಲ. | All these avertments have been considered and rejected by the Enquiry Officer. |
| 3(3)(i-iii)ಆಪಾದಿತರು ತಮ್ಮ ಲಿಖಿತ ವಾದದಲ್ಲಿ ತಾಲ್ಲೂಕು ವೈದ್ಯಾಧಿಕಾರಿಗಳು ಹಾಗೂ ಇತರೆ ಪರಿಣಿತರು ಔಷಧಿಯ ಬಗ್ಗೆ ಶಿಫಾರಸ್ಸುಗಳನ್ನು ಮಾಡಿರುತ್ತಾರೆ. ವಿಚಾರಣೆಯಲ್ಲಿ ದಾಖಲಿಸಿರುವ ನಿಶನೆ ಡಿ-2 ನೋಡಬಹುದು. ದಿಃ 25-2-02ರಂದು ಸ್ಥಾಯಿ ಸಮಿತಿಯ ಸಭೆಗೆ ಜಿಲ್ಲೆಯ ಎಲ್ಲಾ ವೈದ್ಯಾದಿಕಾರಿಗಳು ಹಾಜರಿದ್ದು, ವಿಡಿಯೋ ಪ್ರದರ್ಶನವನ್ನು ವೀಕ್ಷಿಸಿರುತ್ತಾರೆ. ಇದರ ಬಗ್ಗೆ ಚರ್ಚೆಯು ನಡೆದ ನಂತರ ಔಷಧಿಯ ಖರೀದಿಗೆ ನಿರ್ಮಯ ತೆಗೆದುಕೊಳ್ಳಲಾಗಿದೆ. ಆದ್ದರಿಂದ ವೈದ್ಯರ ಬೇಡಿಕೆ ಇಲ್ಲದೆ ರಾಸಾಯನಿಕವನ್ನು ಖರೀದಿಸಲಾಗಿದೆ ಎಂಬ ಆರೋಪ ಸಾಬೀತಾಗುವುದಿಲ್ಲ ಎಂದು ತಿಳಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಈ ಅಂಶವನ್ನು ಅಲ್ಲಗಳೆದಿರುವುದಿಲ್ಲ. ಹಾಗೂ ಈ ಅಂಶವನ್ನು ನಮೂದಿಸಿ ವಿಶ್ಲೇಷಿಸಿ ವರದಿ ನೀಡಿರುವುದಿಲ್ಲ.<br>(ii) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ನಿಶಾನೆ ಪಿ-1ರ ತನಿಖಾ ವರದಿಯಲ್ಲಿ ಔಷಧಿಯ ಬಗ್ಗೆ ಚರ್ಚೆ ನಡೆದಿರುವುದನ್ನು ಒಪ್ಪಲಾಗಿದೆಃ ನಿಶಾನೆ ಪಿ-1ರ ತನಿಖಾ ವರದಿಯಲ್ಲಿ ದಿಃ 25-2-02ರಂದು ನಡೆದ ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯಲ್ಲಿ ಔಷಧಿಯ ಖರೀದಿಯ ಬಗ್ಗೆ ಚರ್ಚೆ ನಡೆದಿರುವುದನ್ನು ನಮೂದಿಸಲಾಗಿದೆ. ಸದರಿ ಚರ್ಚೆಯಲ್ಲಿ ಜಿಲ್ಲೆಯ ವೈದ್ಯಾಧಿಕಾರಿಗಳು ಹಾಜರಿದ್ದು ಇದು ಉತ್ತಮ ಔಷಧಿಯೆಂದು ತಿಳಿಸಿರುತ್ತಾರೆ. ಆದ್ದರಿಂದ ಬೇಡಿಕೆಗೆ ಅನುಗುಣವಾಗಿ ಇದನ್ನು ಖರೀದಿಸಲಾಗಿದೆ. ಎಂದು ತಿಳಿಸಿದ್ದಾರೆ. ವಿಚಾರಣಾ ವರದಿಯಲ್ಲಿ ಇದನ್ನು ಅಲ್ಲಗಳೆದಿರುವುದಿಲ್ಲ. ಈ ಅಂಶವನ್ನು ವರದಿಯಲ್ಲಿ ನಮೂದಿಸಿ ವಿಶ್ಲೇಷಿಸಿ ವರದಿ ನೀಡಿರುವುದಿಲ್ಲ.<br>(iii) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಮೂರನೇ ಆರೋಪದ ಬಗ್ಗೆ 2ನೇ ಆಪಾದಿತ ಅಧಿಕಾರಿಯ ಸಮರ್ಥನೆಃ ಶಸ್ತ್ರ ಚಿಕಿತ್ಸಾ ತಜ್ಞರು ವೈದ್ಯರು ಔಷಧಿಯ ಬಗ್ಗೆ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿರುತ್ತಾರೆ. ದಿಃ25-5-02ರಂದು ನಡೆದ ಸ್ಥಾಯಿ ಸಮಿತಿ | |

| | |
|---|---|
| ಸಭೆಯಲ್ಲಿ ಬೀದರ ಜಿಲ್ಲೆಯ ಎಲ್ಲಾ ವೈದ್ಯಾಧಿಕಾರಿಗಳು ಹಾಜರಿದ್ದು ಔಷಧಿಯ ಬಗ್ಗೆ ಮೌಖಿಕವಾಗಿ ಬೇಡಿಕೆಯನ್ನು ಮಂಡಿಸಿರುತ್ತಾರೆ. ಆದ್ದರಿಂದ ಮೂರನೇ ಆರೋಪವು ಸಾಬೀತಾಗಿಲ್ಲವೆಂದು ಪರಿಗಣಿಸಲು ಕೋರಿದೆ ಎಂದು ತಿಳಿಸಿದ್ದಾರೆ. ವಿಚಾರಣಾ ವರದಿಯಲ್ಲಿ ಇದನ್ನು ಅಲ್ಲಗಳೆದಿರುವುದಿಲ್ಲ. ಈ ಅಂಶವನ್ನು ವರದಿಯಲ್ಲಿ ನಮೂದಿಸಿ ವಿಶ್ಲೇಷಿಸಿ ವರದಿ ನೀಡಿರುವುದಿಲ್ಲ. | These are the same contentions placed before the Enquiry Officer. Hence this cannot be considered as ground for appeal. |
| 3(4) (i-iii) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ನಿಶಾನೆ ಪಿ-3 ರ ಆದೇಶವು ದಿ:30-3-02 ರಂದು ಫ್ಯಾಕ್ಸ್ ಮುಖಾಂತರ ಪರವಾನಗಿ ಆದೇಶವು ದಿ:30-3-02ರಂದು ಸ್ವೀಕೃತವಾಗಿದೆ. ಆ ದಿನ ಶನಿವಾರವಾಗಿತ್ತು, ಆದರೆ ನಿಶಾನೆ ಪಿ-3ರಲ್ಲಿ ಬೆರಳಚ್ಚು ದೋಷದಿಂದ ದಿ:31-3-02ರಂದು ಬೆರಳಚ್ಚು ಆಗಿದೆ. ಇದನ್ನು 30-3-02ರಂದು ಭಾವಿಸಲು ಕೋರಿದೆ ಎಂದು ಮಂಡಿಸಿರುತ್ತಾರೆ. ವಿಚಾರಣಾ ವರದಿಯ 13ನೇ ಪುಟದಲ್ಲಿ ಇದರ ಬಗ್ಗೆ ಉಲ್ಲೇಖಿಸಲಾಗಿದೆ. ವಿಚಾರಣಾಧಿಕಾರಿಯವರು ಇದು ಆಪಾದಿತರಿಗೆ ಸಹಕಾರಿಯಲ್ಲಿ ಎಂದು ತಿಳಿಸಿದ್ದಾರೆ. ಇದು ಯಾವ ರೀತಿ ಸಹಕಾರಿಯಲ್ಲ ಎಂಬ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ಉಲ್ಲೇಖವಿರುವುದಿಲ್ಲ.<br>(ii)ಅಪಾದಿರು ತಮ್ಮ ಲಿಖಿತ ವಾದದಲ್ಲಿ ಶಿಸ್ತು ಪ್ರಾಧಿಕಾರಿಯ ಪರ ಸಾಕ್ಷಿಯು ಇದನ್ನು ಪರಿಗಣಿಸಿರುವುದಿಲ್ಲ: ಡಾ: ಜೆ.ಎನ್.ರಾಜು ಇವರು ಪಾಟೀ ಸವಾಲಿನ ತಮ್ಮ ಉತ್ತರದಲ್ಲಿ ಪಿ-3ರಲ್ಲಿ 31-3-02 ಎಂದು ಬರೆದಿದ್ದು, ಅಂದು ರವಿವಾರವಾದ್ದುರಿಂದ ಆ ದಿನ 30-3-02 ಆಗಿರಬಹುದು ಎಂದು ಹೇಳಲು ಬರುವುದಿಲ್ಲ ಎಂದು ಸಾಕ್ಷಿ ನುಡಿದಿದ್ದಾರೆ ಎಂದು ತಿಳಿಸಿರುತ್ತಾರೆ. ಈ ಅಂಶದ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖವಿರುವುದಿಲ್ಲ. ಈ ಅಂಶವನ್ನು ವಿಚಾರಣಾಧಿಕಾರಿಯವರು ನಮೂದಿಸಿ ವಿಶ್ಲೇಷಿಸಿ ಪರಿಗಣಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರಿಯು ಇದನ್ನು ಪರಿಗಣಿಸಲು ಕೋರಿದೆ.<br>(iii) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ನಾಲ್ಕನೇ ಆರೋಪದ ಬಗ್ಗೆ ಆಪಾದಿತರ ಸಮರ್ಥನೆ: ಆರ್ಥಿಕ ಇಲಾಖೆಯ ಅನುಮೋದನೆಯು ನಿಶಾನೆ ಪಿ-3ರಲ್ಲಿ ದಿ:30-03-02ರಂದು ಸ್ವೀಕೃತವಾಯಿತು. ಅದರನ್ವಯ ಆದೇಶಗಳನ್ನು ಹೊರಡಿಸಲಾಗಿದೆ. ಆದ್ದರಿಂದ ಇದು ನಿಯಮಾನುಸಾರ ಇರುತ್ತದೆ. 4ನೇ ಆರೋಪವು ಸಾಭೀತಾಗಿರುವುದಿಲ್ಲವೆಂದು ಪರಿಗಣಿಸಿ ಆದೇಶ ಹೊರಡಿಸಲು ಕೋರಲಾಗಿದೆ ಎಂದು ತಿಳಿಸಿರುತ್ತಾರೆ. ಈ ಅಂಶದ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖವಿರುವುದಿಲ್ಲ. ಈ ಅಂಶವನ್ನು ವಿಚಾರಣಾಧಿಕಾರಿ ಯವರು ನಮೂದಿಸಿ ವಿಶ್ಲೇಷಿಸಿ ಪರಿಗಣಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರಿಯು ಇದನ್ನು ಪರಿಗಣಿಸಲು ಕೋರಿದೆ. | These are the same contentions placed before the Enquiry Officer. Hence this cannot be considered as ground for appeal. |
| 3(5)(i-iv) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಪಾರದರ್ಶಕತೆ ಅಧಿನಿಯಮ 2002ನ್ನು ಪಾಲಿಸಲಾಗಿದೆ: ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರ 4ನೇ ಪ್ರಕರಣದ(ಇ) ಖಂಡದ ಅನ್ವಯ ಒಂದು ಲಕ್ಷ ರೂಪಾಯಿಗಳಿಗೆ ಮೀರದ ಸರಕನ್ನು ಖರೀದಿಸುವಲ್ಲಿ ಪಾರದರ್ಶಕತೆ ಅಧಿನಿಯಮದ ಉಪಬಂಧಗಳು ಅನ್ವಯವಾಗುವುದಿಲ್ಲ ಎಂಬುದಾಗಿ ಕಲ್ಪಿಸಲಾಗಿದೆ. | |

| | |
|---|---|
| ದಿಃ30-3-02ರಂದು ಆರ್ಥಿಕ ಇಲಾಖೆಯಿಂದ 2001-2002ನೇ ಸಾಲಿನಲ್ಲಿ ಔಷಧಿ ಖರೀದಿಗಾಗಿ ಅನುಮತಿ ನೀಡಲಾಗಿದೆ. ಆದ್ದರಿಂದ ಖರೀದಿಯನ್ನು ದಿಃ 31-3-02ರೊಳಗೆ ಪೂರೈಸಬೇಕಾಗಿದ್ದು ಪಾರದರ್ಶಕತೆ ಅಧಿನಿಯಮದ ಉಲ್ಲಂಘನೆ ಅಗದಂತೆ ಒಂದು ಲಕ್ಷಕ್ಕೆ ಮೀರದಂತೆ ಖರೀದಿ ಆದೇಶಗಳನ್ನು ಹೊರಡಿಸುವುದು ಅನಿವಾರ್ಯವಾಗಿತ್ತು. ಈ ರೀತಿ ಖರೀದಿ ಆದೇಶಗಳನ್ನು ವಿಂಗಡಿಸಬಾರದು ಎಂಬುದಾಗಿ ಯಾವುದೇ ಉಪಭಂದವಿರುವುದಿಲ್ಲ. ಎಲ್ಲಾ ಜಿಲ್ಲಾ ಪಂಚಾಯತಿಗಳಲ್ಲಿ ಇದೇ ಕ್ರಮಗಳನ್ನು ಅನುಸರಿಸಲಾಗುತ್ತಿದೆ. ಎಂದು ತಿಳಿಸಿರುತ್ತಾರೆ. ವಿಚಾರಣಾ ವರದಿಯ ಪುಟ 12 ರಲ್ಲಿ ಈ ಬಗ್ಗೆ ದಾಖಲಿಸಿದ್ದು ಆಪಾದಿತರು ನಮೂದಿಸಿರುವ ಅಂಶವನ್ನು ಪರಿಗಣಿಸಿರುವುದಿಲ್ಲ.ದಿಃ 31-3-02ರೊಳಗೆ ಮೊಬಲಗನ್ನು ವಿನಿಯೋಗ ಮಾಡಲು ಆರ್ಥಿಕ ಇಲಾಖೆಯು ತಿಳಿಸಿರುವ ಹಿನ್ನಲೆಯಲ್ಲಿ ಪಾರದರ್ಶಕತೆ ಅಧಿನಿಯಮದ ಉಪಬಂಧಗಳನ್ನು ಪಾಲಿಸಲು ಸಾಧ್ಯವಾಗಿರುವುದಿಲ್ಲ.ಇದನ್ನು ವಿಚಾರಣಾಧಿಕಾರಿಗಳು ಪರಿಗಣಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರಿಯವರು ಪರಿಗಣಿಸಲು ಕೋರಿದೆ.<br>(ii) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಕಚೇರಿಯ ಪತ್ರಾಂಕಿತ ಸಹಾಯಕರು ಮಂಡಿಸಿರುವ ಮಾಹಿತಿಗಳನ್ವಯ ಕ್ರಮ ಜರುಗಿಸಲಾಗಿದೆಃ ಖರೀದಿ ಮುಂತಾದ ವಿಷಯಗಳಲ್ಲಿ ಕಛೇರಿಯ ಸಿಬ್ಬಂದಿಯಾದ ಬಡ್ಜೆಟ್ ಸಹಾಯಕರು, ಉಗ್ರಾಣ ಸಹಾಯಕರು ಹಾಗೂ ಕಚೇರಿಯ ಪತ್ರಾಂಕಿತ ಸಹಾಕರು ಈ ಬಗ್ಗೆ ವ್ಯತಿರಿಕ್ತ' ಟಿಪ್ಪಣಿಗಳನ್ನು ಮಂಡಿಸಿರುವುದಿಲ್ಲ. ಆದ್ದರಿಂದ 2ನೇ ಆಪಾದಿತ ಅಧಿಕಾರಿಯು ಯಾವುದೇ ದುರ್ನಡತೆ ಎಸಗಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಈ ಅಂಶದ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖವಿರುವುದಿಲ್ಲ. ಈ ಅಂಶವನ್ನು ವಿಚಾರಣಾಧಿಕಾರಿಯವರು ನಮೂದಿಸಿ ವಿಶ್ಲೇಷಿಸಿ ಪರಿಗಣಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರಿಯು ಇದನ್ನು ಪರಿಗಣಿಸಲು ಕೋರಿದೆ.<br>(iii) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಸಾಕ್ಷಿಯ ಹೇಳಿಕೆಃ 5ನೇ ಆರೋಪದ ಬಗ್ಗೆ ಶಿಸ್ತು ಪ್ರಾಧಿಕಾರಿಯ ಪರ ಸಾಕ್ಷಿದಾರರಾದ ಡ್ಲಾ ಜೆ.ಎನ್. ರಾಜು ಇವರು ತಮ್ಮ ಸಾಕ್ಷಿ ಹೇಳಿಕೆಯಲ್ಲಿ ಒಟ್ಟು ಬಿಲ್ಲುಗಳನ್ನು ತಮ್ಮ ಅಧಿಕಾರಿ ವ್ಯಾಪ್ತಿಯಲ್ಲಿ ಬರುವಂತೆ ವಿಭಜಿಸಿ ಅದೇಶ ಕೊಟ್ಟಿದ್ದಾರೆ ಎಂಬುದಾಗಿ ಮಾತ್ರ ಸಾಕ್ಷಿ ನುಡಿದಿದ್ದಾರೆ. ಆದರೆ 2ನೇ ಅಪಾದಿತರು ಕರ್ನಾಟಕ ಪಾರದರ್ಶಕಶೆ ಅಧಿನಿಯಮದ ಉಪಬಂಧಗಳನ್ನು ಉಲ್ಲಂಘಿಸಿದ್ದಾರೆ ಎಂದು ಸಾಕ್ಷಿ ನುಡಿದಿರುವುದಿಲ್ಲ ಎಂದು ಮಂಡಿಸಿರುತ್ತಾರೆ. ಈ ಅಂಶದ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖವಿರುವುದಿಲ್ಲ. ಈ ಅಂಶವನ್ನು ವಿಚಾರಣಾಧಿಕಾರಿಯವರು ನಮೂದಿಸಿ ವಿಶ್ಲೇಷಿಸಿ ಪರಿಗಣಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರಿಯು ಇದನ್ನು ಪರಿಗಣಿಸಲು ಕೋರಿದೆ.<br>(iv) ಆಪಾದಿತರು ತಮ್ಮ ಲಿಖಿತ ವಾದದಲ್ಲಿ 5 ನೇ ಆರೋಪದ ಬಗ್ಗೆ 2ನೇ ಆಪಾದಿತ ಅಧಿಕಾರಿಯವರ ಸಮರ್ಥನೆಃ ಖರೀದಿಗಳನ್ನು 2ನೇ ಆಪಾದಿತ ಅಧಿಕಾರಿಯವರ ಅಧಿಕಾರ ವ್ಯಾಪ್ತಿಯಲ್ಲಿ ಮಾಡಿರುವುದಿಲ್ಲ. ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯ ಸಭೆಯಲ್ಲಿ ಅನುಮೋದನೆ ಆದನಂತರ 1ನೇ ಆಪಾದಿತ ಅಧಿಕಾರಿಯವರು ಆಡಳಿತಾತ್ಮಕ ಅನುಮೋದನೆ ನೀಡಿದ ನಂತರ | |

| | |
|---|---|
| ಆರ್ಥಿಕ ಇಲಾಖೆಯ ಅನುಮೋದನೆಯೊಂದಿಗೆ ಔಷಧಿಗಳನ್ನು ಖರೀದಿಸಲಾಗಿದೆ. ಖರೀದಿಗಳನ್ನು ಕೆ.ಎಸ್.ಐ.ಎಂ.ಸಿ ಮುಖಾಂತರ ಮಾಡಿರುವುದರಿಂದ ಪಾರದರ್ಶಕತೆ ಅಧಿನಿಯಮ 2002 ಉಲ್ಲಂಘಿಸಿರುವುದಿಲ್ಲ. 5ನೇ ಆರೋಪವು ಸಾಬೀತಾಗಿರುವುದಿಲ್ಲ ಎಂದು ಪರಿಗಣಿಸಲು ಕೋರಿದೆ ಎಂದು ಮಂಡಿಸಿತ್ತಾರೆ. ವಿಚಾರಣಾ ಅವಧಿಯಲ್ಲಿ 5ನೇ ಆರೋಪದ ಬಗ್ಗೆ ಪ್ರತ್ಯೇಕವಾದ ವಿಶ್ಲೇಷಣೆ ಇರುವುದಿಲ್ಲ. ಆದ್ದರಿಂದ ವಿಚಾರಣಾ ವರದಿಯು ದೋಷಪೂರಿತವಾಗಿದೆ. ಈ ಅಂಶವನ್ನು ಶಿಸ್ತು ಪ್ರಾಧಿಕಾರಿಯು ಪರಿಗಣಿಸಲು ಕೋರಿದೆ. | These are the same contentions placed before the Enquiry Officer. Hence this cannot be considered as ground for appeal. |
| 3(6)(i-iv) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಸಾಕ್ಷಿದಾರರ ಹೇಳಿಕೆ ಬಗ್ಗೆ: 6ನೇ ಆರೋಪದ ಬಗ್ಗೆ ಶಿಸ್ತು ಪ್ರಾಧಿಕಾರಿಯ ಪರ ಸಾಕ್ಷಿದಾರರಾದ ಡಾ:ಕೆ.ಎನ್.ರಾಜು ರವರು ಮತ್ತು 600 ಕಿಲೋಮೀಟರಖ ಇದ್ದ ಸ್ಥಳದಿಂದ ಒಂದೇ ದಿವಸ ಇವುಗಳನ್ನು ಖರೀದಿಸಿದ್ದು ಎಂದು ಸಾಕ್ಷಿ ನುಡಿದಿದ್ದಾರೆ. 600 ಕಿಲೋಮೀಟರ್ ದೂರದಿಂದ ಒಂದೇ ದಿನದಲ್ಲಿ ಔಷಧಿಯನ್ನು ಖರೀದಿಸಿರುವುದು ದುರ್ನಡತೆ ಪದವ್ಯಾಪ್ತಿಯಲ್ಲಿ ಬರುವುದಿಲ್ಲ. ಬೆಂಗಳೂರಿನಲ್ಲಿರುವ ಸಂಸ್ಥೆಯ ಔಷಧಿಗಳನ್ನು ಬೀದರ್‌ನಲ್ಲಿ ದಾಸ್ತಾನು ನಿರ್ವಹಿಸಿ ಸರಬರಾಜು ಮಾಡಲು ಯಾವುದೇ ನಿರ್ಭಂದವಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಈ ಅಂಶದ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖವಿರುವುದಿಲ್ಲ. ಈ ಅಂಶವನ್ನು ವಿಚಾರಣಾಧಿಕಾರಿಯವರು ನಮೂದಿಸಿ ವಿಶ್ಲೇಷಿಸಿ ಪರಿಗಣಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರಿಯು ಇದನ್ನು ಪರಿಗಣಿಸಲು ಕೋರಿದೆ.<br>(ii)ಆಪಾದಿತರು ತಮ್ಮ ಲಿಖಿತ ವಾದದಲ್ಲಿ ದಾಸ್ತಾನು ವಹಿಗೆ ಅದೇ ದಿನ ತೆಗೆದು ಕೊಂಡಿರುವುದು ದುರ್ನಡತೆ ಆಗುವುದಿಲ್ಲ: ದಾಸ್ತಾನು ವಹಿಗೆ ಸರಬರಾಜಾದ ಔಷಧಿಗಳನ್ನು ಅಯಾ ದಿನದಂದೇ ತೆಗೆದುಕೊಳ್ಳಬೇಕಾಗಿದೆ. ದಾಸ್ತಾನು ವಹಿಯನ್ನು ವಿಚಾರಣಾ ವೇಳೆಯಲ್ಲಿ ಹಾಜರುಪಡಿಸಿ ಸಾಭೀತಾ ಪಡಿಸಿರುವುದಿಲ್ಲ. ಸರಬರಾಜಾದ ಔಷಧಿಗಳನ್ನು ಅದೇ ದಿನ ದಾಸ್ತಾನಿಗೆ ತೆಗೆದುಕೊಂಡಿರುವುದು ದುರ್ನಡತೆಯ ಪದವ್ಯಾಪ್ತಿಯಲ್ಲಿ ಬರುವುದಿಲ್ಲ ಎಂದು ತಿಳಿಸಿದ್ದಾರೆ. ಈ ಅಂಶದ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖವಿರುವುದಿಲ್ಲ. ಈ ಅಂಶವನ್ನು ವಿಚಾರಣಾಧಿಕಾರಿಯವರು ನಮೂದಿಸಿ ವಿಶ್ಲೇಷಿಸಿ ಪರಿಗಣಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರಿಯು ಇದನ್ನು ಪರಿಗಣಿಸಲು ಕೋರಿದೆ.<br>(iii)ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಸಂಸ್ಥೆಗೆ ಹಣವನ್ನು ಪಾವತಿಸಿರುವುದು ದುರ್ನಡತೆಯ ಪದವ್ಯಾಪ್ತಿಯಲ್ಲಿ ಬರುವುದಿಲ್ಲ: ಖರೀದಿಸಿರುವ ಔಷಧವನ್ನು ದಾಸ್ತಾನಿಗೆ ತೆಗೆದುಕೊಂಡು ಅವುಗಳನ್ನು ಖರೀದಿಯ ಉದ್ದೇಶಕ್ಕಾಗಿ ಬಳಸಲಾಗಿದೆ ಹಾಗೂ ಆರ್ಥಿಕ ಇಲಾಖೆಯು ಸೂಚಿಸಿರುವಂತೆ 2001-02ನೇ ಸಾಲಿನ ಆಯವ್ಯಯದಲ್ಲಿ ಉಳಿತಾಯದ ಹಣದಿಂದ ಪಾವತಿ ಮಾಡಲಾಗಿದೆ. ಆದ್ದರಿಂದ ಯಾವುದೇ ದುರ್ನಡತೆ ಇರುವುದಿಲ್ಲ ಎಂದು ತಿಳಿಸಿದ್ದಾರೆ. ಈ ಅಂಶದ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖವಿರುವುದಿಲ್ಲ. ಈ ಅಂಶವನ್ನು ವಿಚಾರಣಾಧಿಕಾರಿಯವರು | |

| | |
|---|---|
| ನಮೂದಿಸಿ ವಿಶ್ಲೇಷಿಸಿ ಪರಿಗಣಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರಿಯು ಇದನ್ನು ಪರಿಗಣಿಸಲು ಕೋರಿದೆ.<br>(iv) ಆಪಾದಿತರು ತಮ್ಮ ಲಿಖಿತ ವಾದದಲ್ಲಿ 6ನೇ ಆರೋಪದ ಬಗ್ಗೆ 2ನೇ ಆಪಾದಿತರ ಸಮರ್ಥನೆಃ Amecrylate a Bio adhesive ಇದನ್ನು M/s Shamchem Impex Hyderabad ಇವರು ತಯಾರಿಸಿದ್ದು M/s Karnatka State Industrial Supplies and Marketing Co-operative Federation Bangalore ಇವರ ಮುಖಾಂತರ ಖರೀದಿಸಿ ಖರೀದಿಸಿರುವ ಔಷಧಿಯನ್ನು ದಾಸ್ತಾನಿಗೆ ತೆಗೆದುಕೊಳ್ಳಲಾಗಿದೆ ಹಾಗೂ ನಿಯಾಮಾನುಸಾರ ಮೊಬಲಗು ಪಾವತಿ ಮಾಡಲಾಗಿದೆ. ಆದ್ದರಿಂದ 6ನೇ ಆರೋಪವು ಸಾಬೀತಾಗಿಲ್ಲ ಎಂದು ಪರಿಗಣಿಸಲು ಕೋರಿದೆ ಎಂದು ಮಂಡಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ 6ನೇ ಆರೋಪದ ಬಗ್ಗೆ ಪ್ರತ್ಯೇಕವಾದ ವಿಶ್ಲೇಷಣೆ ಇರುವುದಿಲ್ಲ. ಆದ್ದರಿಂದ ವಿಚಾರಣಾ ವರದಿಯು ದೋಷಪೂರಿತವಾಗಿದೆ. ಈ ಅಂಶವನ್ನು ಶಿಸ್ತು ಪ್ರಾಧಿಕಾರಿಯು ಪರಿಗಣಿಸಲು ಕೋರಿದೆ. | These are the same contentions placed before the Enquiry Officer. Hence this cannot be considered as ground for appeal. |
| 3(7)(i-iv)ಆಪಾದಿತರು ತಮ್ಮ ಲಿಖಿತ ವಾದದಲ್ಲಿ ತನಿಖಾ ವರದಿ ನಿಶಾನೆ ಪಿ-1 ರನ್ವಯ ಮಾರುಕಟ್ಟೆಯಲ್ಲಿ ಹಲವಾರು ಪಧಾರ್ಥಗಳನ್ನು ಲಭ್ಯವಿರುವ ಬಗ್ಗೆ ಯಾವುದೇ ಮಾಹಿತಿ ಇಲ್ಲಃ ನಿಶಾನೆ ಪಿ-1ರಲ್ಲಿ Amercrylate a bio Adhesive ಬಗ್ಗೆ ಇತರೇ ಸಂಸ್ಥೆಗಳು ಹಾಗೂ ಅವುಗಳ ದರ ಪಟ್ಟಿಯ ವಿವರಗಳನ್ನು ನಮೂದಿಸಿರುವುದಿಲ್ಲ. ಆದ್ದರಿಂದ ಇದೇ ಪದಾರ್ಥವು ಮಾರುಕಟ್ಟೆಯಲ್ಲಿ ಹಲವಾರು ಲಭ್ಯವಿರುವುದು ಸಾಭೀತಾಗಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಈ ಅಂಶದ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖವಿರುವುದಿಲ್ಲ. ಈ ಅಂಶವನ್ನು ವಿಚಾರಣಾಧಿಕಾರಿಯವರು ನಮೂದಿಸಿ ವಿಶ್ಲೇಷಿಸಿ ಪರಿಗಣಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರಿಯು ಇದನ್ನು ಪರಿಗಣಿಸಲು ಕೋರಿದೆ.<br>(ii) ಆಪಾದಿತರು ತಮ್ಮ ಲಿಖಿತ ವಾದದಲ್ಲಿ M/s Shamchem Impex ಸಂಸ್ಥೆಯ ದರಗಳಲ್ಲಿ ಖರೀದಿಸಲಾಗಿದೆಃ ಔಷಧಿಯ ತಯಾರಕರಾದ M/s Shamchem Impex Hyderabad ಇವರು ಔಷಧಿ ತಯಾರಿಕಾ ಸಂಸ್ಥೆ ಆಗಿದ್ದು ಯಾವುದೇ ಹೆಚ್ಚುವರಿ ಕವೀಷನ್ ಇಲ್ಲದೇ ಇದನ್ನು ಖರೀದಿಸಲಾಗಿದೆ. ಕಮೀಷನ್ ನೀಡದೇ ಹಣ ಉಳಿಸಲಾಗಿದೆ. ಎಂದು ತಿಳಿಸಿರುತ್ತಾರೆ. ಈ ಅಂಶದ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖವಿರುವುದಿಲ್ಲ. ಈ ಅಂಶವನ್ನು ವಿಚಾರಣಾಧಿಕಾರಿ ಯವರು ನಮೂದಿಸಿ ವಿಶ್ಲೇಷಿಸಿ ಪರಿಗಣಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರಿಯು ಇದನ್ನು ಪರಿಗಣಿಸಲು ಕೋರಿದೆ.<br>(iii) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ದರಗಳ ಬಗ್ಗೆ ಚೌಕಾಶಿ ಮಾಡಿ ಖಾತರಿಪಡಿಸಿಕೊಳ್ಳಲಾಗಿದೆಃ ದರಗಳ ಬಗ್ಗೆ ಸರಬರಾಜುದಿರರಾದ ಕೆ.ಎಸ.ಐ.ಎಂ.ಎಸ್ ಜೊತೆ ಸಮಾಲೋಚಿಸಿ ಯಾವುದೇ ಹೆಚ್ಚಿನ ಕಮೀಷನ್/ ಮೊತ್ತ/ ದರ ನೀಡದೇ ಖರೀದಿಸಲಾಗಿದೆ ಎಂದು ಮಂಡಿಸಿರುತ್ತಾರೆ. ಈ ಅಂಶದ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖವಿರುವುದಿಲ್ಲ. ಈ ಅಂಶವನ್ನು ವಿಚಾರಣಾಧಿಕಾರಿಯವರು ನಮೂದಿಸಿ ವಿಶ್ಲೇಷಿಸಿ ಪರಿಗಣಿಸದೇ | |

| | |
|---|---|
| ಇರುವುದರಿಂದ ಶಿಸ್ತು ಪ್ರಾಧಿಕಾರಿಯು ಇದನ್ನು ಪರಿಗಣಿಸಲು ಕೋರಿದೆ.<br>(iv) ಆಪಾದಿತರು ತಮ್ಮ ಲಿಖಿತ ವಾದದಲ್ಲಿ 7ನೇ ಆರೋಪದ ಬಗ್ಗೆ 2ನೇ ಆಪಾದಿತ ಅಧಿಕಾರಿಯವರ ಸಮರ್ಥನೆಃ Amecrylate ಪಧಾರ್ಥವನ್ನು M/s Shamchem Impex Hyderabad ಸಂಸ್ಥೆಯು ತಯಾರಿಸಿದ್ದು ತಯಾರಿಕಾ ಸಂಸ್ಥೆಯ ದರಗಳಲ್ಲಿ ಕೆ.ಎಸ್.ಐ.ಎಂ.ಸಿ ಮುಖಾಂತರ ಸರಬರಾಜಿಗೆ ಯಾವುದೇ ಕಮೀಷನ್ ನೀಡದೇ ಖರೀದಿಸಲಾಗಿದೆ. ಈ ಔಷಧಿಯ ತಯಾರು/ಸರಬರಾಜಿನ ಬಗ್ಗೆ ಬೇರೆ ಸಂಸ್ಥೆಗಳು ಇರುವುದಿಲ್ಲ. ಆದ್ದರಿಂದ 7 ನೇ ಆರೋಪವು ಸಾಬೀತಾಗಿಲ್ಲ ಎಂದು ಪರಿಗಣಿಸಲು ಕೋರಿದೆ ಎಂದು ತಿಳಿಸಿದ್ದಾರೆ ವಿಚಾರಣಾ ವರದಿಯಲ್ಲಿ 7ನೇ ಆರೋಪದ ಬಗ್ಗೆ ಪ್ರತ್ಯೇಕವಾದ ವಿಶ್ಲೇಷಣೆ ವಿರುವುದಿಲ್ಲ. ಆದ್ದರಿಂದ ವಿಚಾರಣಾ ವರದಿಯು ದೋಷಪೂರಿತವಾಗಿದೆ.ಈ ಅಂಶವನ್ನು ಶಿಸ್ತು ಪ್ರಾಧಿಕಾರಿಯು ಪರಿಗಣಿಸಲು ಕೋರಿದೆ. | These are the same contentions placed before the Enquiry Officer. Hence this cannot be considered as ground for appeal. |
| 3(8)(i-iii)ಆಪಾದಿತರು ಇಮ್ಮ ಲಿಖಿತ ವಾದದಲ್ಲಿ ನಿಶಾನೆ ಪಿ-4 2ನೇ ಆಪಾದಿತ ಅಧಿಕಾರಿಯವರ ಕಛೇರಿಯಲ್ಲಿ ಸ್ವೀಕೃತವಾಗಿರುವುದಿಲ್ಲಃ (ಎ)ನಿಶಾನೆ ಪಿ-4 ಸರ್ಕಾರದ ಸುತೋಲೆಯಾಗಿದ್ದು ಇದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾಗಿರುವುದಿಲ್ಲ ಎಂದು ಮಂಡಿಸಿರುತ್ತಾರೆ. ವಿಚಾರಣಾ ವರದಿಯ ಪುಟ 10 ಮತ್ತು 11ರಲ್ಲಿ ಈ ಬಗ್ಗೆ ಉಲ್ಲೇಖಿಸಿ ಸುತೋಲೆಯು ತಲುಪಿಲ್ಲ ಎಂಬ ವಾದವು ಒಪ್ಪುವಂತಹದಲ್ಲ. ಸರ್ಕಾರದ ಸುತೋಲೆಯನ್ನು ಪ್ರತಿಯೊಬ್ಬರಿಗೂ ಜಾರಿ ಮಾಡಿ ಸ್ವೀಕೃತಿ ಪಡೆಯಬೇಕಾಗಿಲ್ಲ ಎಂದು ನಿರ್ಣಹಿಸಲಾಗಿದೆ. ಉಲ್ಲೇಖಿತ ಸುತ್ತೋಲೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾಗದೇ ಇರುವುದರಿಂದ ಈ ಸುತೋಲೆ ಬಗ್ಗೆ ಅರಿವು ಇರಬೇಕಾದ್ದಲ್ಲಿ ಅದನ್ನು ಎಲ್ಲರಿಗೂ ತಲುಪಿಸಬೇಕಾಗಿದೆ. ಇದನ್ನು ಶಿಸ್ತು ಪ್ರಾಧಿಕಾರಿಯವರು ಪರಿಗಣಿಸಲು ಕೋರಿದೆ.<br>(ಬಿ) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ನಿಶಾನೆ ಪಿ-4ರ ದಿಃ21-3-02 ಅಗಿದ್ದು ಇದು ಖರೀದಿಯ ದಿನಾಂಕ ಅಂದರೆ ದಿಃ31-3-02ರೊಳಗೆ ಬೀದರ್ ಜಿಲ್ಲೆಯ ಯಾವುದೇ ಕಛೇರಿಗಳಲ್ಲಿ ಸ್ವೀಕೃತವಾಗಿರುವ ಸಾಧ್ಯತೆ ಇರುವುದಿಲ್ಲ.ಎಂದು ತಿಳಿಸಿದ್ದಾರೆ.ವಿಚಾರಣಾ ವರದಿಯ ಪುಟ 10 ಮತ್ತು 11ರಲ್ಲಿ ಈ ಬಗ್ಗೆ ಉಲ್ಲೇಖಿಸಿ ಸುತೋಲೆಯು ತಲುಪಿಲ್ಲ ಎಂಬ ವಾದವು ಒಪ್ಪುವಂತಹದಲ್ಲ. ಸರ್ಕಾರದ ಸುತ್ತೋಲೆಯನ್ನು ಪ್ರತಿಯೊಬ್ಬರಿಗೂ ಜಾರಿ ಮಾಡಿ ಸ್ವೀಕೃತಿಪಡೆಯಬೇಕಾಗಿಲ್ಲ ಎಂದು ನಿರ್ಣಹಿಸಲಾಗಿದೆ. ಉಲ್ಲೇಖಿತ ಸುತ್ತೋಲೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾಗದೇ ಇರುವುದರಿಂದ ಈ ಸುತ್ತೋಲೆಯ ಬಗ್ಗೆ ಅರಿವು ಇರಬೇಕಾದ್ದಲ್ಲಿಅದನ್ನು ಎಲ್ಲರಿಗೂ ತಲುಪಿಸಬೇಕಾಗಿದೆ. ಇದನ್ನು ಶಿಸ್ತು ಪ್ರಾಧಿಕಾರಿಯವರು ಪರಿಗಣಿಸಲು ಕೋರಿದೆ.<br>(ii) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ನಿಶಾನೆ ಪಿ-4ರಲ್ಲಿ ಕೆ.ಎಸ್.ಐ.ಎಂ.ಸಿ ಮುಖಾಂತರ ಖರೀದಿಸಬಾರದು ಎಂಬ ನಿರ್ಬಂದ ವಿಧಿಸಲಾಗಿದೆಃ ನಿಶಾನೆ ಪಿ-4ರ ಸುತ್ತೋಲೆಯಲ್ಲಿ ಕೆ.ಎಸ್.ಐ.ಎಂ.ಸಿ ಮುಖಾಂತರ ಸರಕುಗಳನ್ನು | |

| | |
|---|---|
| ಖರೀದಿಸಬಾರದು ಎಂದು ತಿಳಿಸಲಾಗಿದೆ. ಅಂದರೆ ಈ ಸುತ್ತೋಲೆ ಪೂರ್ವದಲ್ಲಿ ವಿವಿಧ ಇಲಾಖೆಗಳು ಕೆ.ಎಸ್.ಐ.ಎಂ.ಸಿಯ ಮುಖಾಂತರ ಖರೀದಿಸುತ್ತಿದ್ದವು ಎನ್ನುವುದು ಸಾಭೀತಾಗಿದೆ. ಸುತೋಲೆಯು 2ನೇ ಅಪಾದಿತ ಅಧಿಕಾರಿಯವರ ಕಛೇರಿಯಲ್ಲಿ ಸ್ವೀಕೃತವಾಗದೆ ಇರುವುದಿರಿಂದ ಸುತ್ತೋಲೆಯ ಸೂಚನೆಗಳ ಬಗ್ಗೆ ಅವರಿಗೆ ಮಾಹಿತಿ ಇರುವುದಿಲ್ಲ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖಿಸಿ ವಿಶ್ಲೇಷಿಸಿ ವರದಿ ನೀಡಿರುವುದಿಲ್ಲ. ಆದ್ದರಿಂದ ಇದನ್ನು ಶಿಸ್ತು ಪ್ರಾಧಿಕಾರಿಯು ಇದನ್ನು ಪರಿಗಣಿಸಲು ಕೋರಿದೆ.<br>(iii) ಆಪಾದಿತರು ತಮ್ಮ ಲಿಖತ ವಾದದಲ್ಲಿ 8 ನೇ ಆರೋಪದ ಬಗ್ಗೆ ಆಪಾದಿತರ ಸಮರ್ಥನೆಃ ನಿಶಾನೆ ಪಿ-4ರಲ್ಲಿ ನಿರ್ದೇಶಿಸಿರುವಂತೆ ಕೆ.ಎಸ.ಐ.ಎಂ.ಸಿ ಮುಖಾಂತರ ಸರಕುಗಳನ್ನು ಖರೀದಿಸಲಾಗಿದೆ ಎಂದು ಆಪಾದಿಸಲಾಗಿದೆ. ಖರೀದಿಯು ಕರ್ನಾಟಕ ಪಾರದರ್ಶಕತೆ ಅಧಿನಿಯಮ 1999ರನ್ವಯ ಕೆ.ಎಸ್.ಐ.ಎಂ.ಸಿ ಮುಖಾಂತರ ಖರೀದಿಸಲಾಗಿದೆ. ಆದರೆ ಕೆ.ಎಸ್.ಐ.ಎಂ.ಸಿ ಮುಖಾಂತರ ಖರೀದಿಸಬಾರದೆಂದು ದಿಃ 21-3-02ರಲ್ಲಿ ಸರ್ಕಾರವು ಸುತ್ತೋಲೆ ಹೊರಡಿಸಿದ್ದು ಸದರಿ ಸುತ್ತೋಲೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾಗದೇ ಇರುವುದರಿಂದ ಹಾಗೂ 2ನೇ ಅಪಾದಿತರ ಕಛೇರಿಯಲ್ಲಿ ದಿಃ 31-3-02ರೊಳಗೆ ಸಿವೀಕೃತವಾಗದೇ ಇರುವುದರಿಂದ ಇಂತಹ ಸುತ್ತೋಲೆ ಇಲ್ಲವೆಂದು ಭಾವಿಸಿ ಕ್ರಮ ಜರುಗಿಸಲಾಗಿದೆ. ಆದ್ದರಿಂದ 8ನೇ ಆರೋಪವು ಸಾಬೀತಾಗಿಲ್ಲವೆಂದು ಪರಿಗಣಿಸಲು ಕೋರಿದೆ. ಎಂದು ತಿಳಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ 8ನೇ ಆರೋಪದ ಬಗ್ಗೆ ಪ್ರತ್ಯೇಕವಾದ ವಿಶ್ಲೇಷಣೆ ಇರುವುದಿಲ್ಲ. ಆದ್ದರಿಂದ ವಿಚಾರಣಾ ವರದಿಯು ದೋಷಪೂರಿತವಾಗಿದೆ. ಈ ಅಂಶವನ್ನು ಶಿಸ್ತು ಪ್ರಾಧಿಕಾರಿಯು ಪರಿಗಣಿಸಲು ಕೋರಿದೆ. | These are the same contentions placed before the Enquiry Officer. Hence this cannot be considered as ground for appeal. |
| 3(9)(i-iii)ಆಪಾದಿತರು ಇಮ್ಮ ಲಿಖತ ವಾದದಲ್ಲಿ ಪಟ್ಟಿಯಲ್ಲಿಲದ ಔಷಧಿಯನ್ನು ಖರೀದಿಸಬಾರದೆಂದು ಯಾವುದೇ ನಿರ್ಬಂದವಿಲ್ಲಃ ನಿಶಾನೆ ಪಿ-5ರಲ್ಲಿ ಕೇಂದ್ರರ List of Drugs under family welfare programme ಇದನ್ನು ಒದಗಿಸಲಾಗಿದೆ. ಸದರಿ ಪಟ್ಟಿಯಲ್ಲಿರುವ ಅಂಟಿಬಯ್ಯಾಟಿಕ್‌ಗಳನ್ನು ಹೊರತು ಪಡಿಸಿ ಉಳಿದವನ್ನು ಖರೀದಿಸಿಲೇಬೇಕಾಗಿದೆ. ಆದರೆ ಚಿಕಿತ್ಸೆಗೆ ಉಪಯುಕ್ತವಾಗಿರುವ ಇತರೆ ಔಷಧಿಗಳನ್ನು ಅದರಲ್ಲೂ ಹೊಸ ಸಂಶೋಧನೆಯ ಮೂಲಕ ಬಂದಿರುವ ಔಷಧಿಗಳನ್ನು ಖರೀದಿಸಬಾರದೆಂದು ನಿಷೇದ ಇರುವುದಿಲ್ಲ ಎಂದು ಮಂಡಿಸಿರುತ್ತಾರೆ. ಈ ಅಂಶದ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖವಿರುವುದಿಲ್ಲ. ಈ ಅಂಶವನ್ನು ವಿಚಾರಣಾಧಿಕಾರಿ ಯವರು ನಮೂದಿಸಿ ವಿಶ್ಲೇಷಿಸಿ ಪರಿಗಣಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರಿಯು ಇದನ್ನು ಪರಿಗಣಿಸಲು ಕೋರಿದೆ.<br>(ii) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಖರೀದಿ ಬಗ್ಗೆ ಸಕ್ಷಮ ಪ್ರಾಧಿಕಾರದ ಅನುಮೋದನೆ ಇದೆಃ ಖರೀದಿಯನ್ನು ಜಿಲ್ಲಾ ಪಂಚಾಯತಿಯ ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯು ಅನುಮೋದಿಸಿದ್ದು, 1ನೇ ಆಪಾದಿತರಾದ ಕಾರ್ಯ ನಿರ್ವಹಣಾಧಿಕಾರಿಗಳು ಆಡಳಿತ್ಮಾಕ ಅನುಮೋದನೆ ನೀಡಿದ್ದಾರೆ. | |

| | |
|---|---|
| ಮುಖ್ಯ ಲೆಕ್ಕಾಧಿಕಾರಿಗಳು ಬಿಲ್ಲನ್ನು ಮೇಲು ರುಜು ಮಾಡಿದ್ದಾರೆ. ಆದ್ದರಿಂದ ಖರೀದಿಯ ನಿಯಮಾನುಸಾರ ಇದೆ. ಎಂದು ಮಂಡಿಸಿರುತ್ತಾರೆ. ಈ ಅಂಶದ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖವಿರುವುದಿಲ್ಲ. ಈ ಅಂಶವನ್ನು ವಿಚಾರಣಾಧಿಕಾರಿಯವರು ನಮೂದಿಸಿ ವಿಶ್ಲೇಷಿಸಿ ಪರಿಗಣಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರಿಯು ಇದನ್ನು ಪರಿಗಣಿಸಲು ಕೋರಿದೆ.<br>(iii) ಆಪಾದಿತರು ತಮ್ಮ ಲಿಖಿತ ವಾದದಲ್ಲಿ 9ನೇ ಆರೋಪದ ಬಗ್ಗೆ 2ನೇ ಅಪಾದಿತರ ಸಮರ್ಥನೆಃ Amecrylate ಔಷಧಿಯನ್ನು ಪೂರ್ಣ ಪ್ರಮಾಣದ ಅಧ್ಯಯನ ನಡೆಸಿ ಸ್ಥಾಹಿ ಸಮಿತಿಯ ಅನುಮೋದನೆಯೊಂದಿಗೆ ಖರೀದಿಸಲಾಗಿದೆ. ಆದ್ದರಿಂದ ಈ ಆರೋಪವು ಸಾಬೀತಾಗಿಲ್ಲ ಎಂದು ಪರಿಗಣಿಸಲು ಕೋರಿದೆ ಎಂದು ತಿಳಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ 9ನೇ ಆರೋಪದ ಬಗ್ಗೆ ಪ್ರತ್ಯೇಕವಾದ ವಿಶ್ಲೇಷಣೆ ಇರುವುದಿಲ್ಲ. ಆದರಿಂದ ವಿಚಾರಣಾ ವರದಿಯು ದೋಷಪೂರಿತವಾಗಿದೆ. ಈ ಅಂಶವನ್ನು ಶಿಸ್ತು ಪ್ರಾಧಿಕಾರಿಯು ಪರಿಗಣಿಸಲು ಕೋರಿದೆ. | These are the same contentions placed before the Enquiry Officer. Hence this cannot be considered as ground for appeal. |
| 3(10)(i-iii) ಆಪಾದಿತರು ತಮ್ಮ ಲಿಖಿತ ವಾದದಲ್ಲಿ 10ನೇ ಆರೋಪದ ಬಗ್ಗೆ ಸಾಕ್ಷಿಯು ಯಾವುದೇ ಹೇಳಿಕೆಯನ್ನು ನೀಡಿರುವುದಿಲ್ಲ 10ನೇ ಆರೋಪದ ಬಗ್ಗೆ ಡಾಃಜೆ.ಎನ್.ರಾಜು ಇವರು ಯಾವುದೇ ಸಾಕ್ಷಿಯನ್ನು ನುಡಿದಿರುವುದಿಲ್ಲ. ನಿಶಾನೆ ಪಿ-1 ತನಿಖಾ ವರದಿಯಲ್ಲಿ ಯೋಜನಾ ನಿರ್ದೇಶಕರಿಂದ ಅನುಮತಿ ಪಡೆದು ಔಷಧಿಯನ್ನು ಖರೀದಿಸಬೇಕಿತ್ತು ಎಂಬ ಬಗ್ಗೆ ನಮೂದು ಇಲ್ಲ. ಆದ್ದರಿಂದ 10ನೇ ಆರೋಪವು ಸಾಬೀತಾಗುವುದಿಲ್ಲ ಎಂದು ತಿಳಿಸಿರುತ್ತಾರೆ. ಈ ಅಂಶದ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖವಿರುವುದಿಲ್ಲ. ಈ ಅಂಶವನ್ನು ವಿಚಾರಣಾಧಿಕಾರಿಯವರು ನಮೂದಿಸಿ ವಿಶ್ಲೇಷಿಸಿ ಪರಿಗಣಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರಿಯು ಇದನ್ನು ಪರಿಗಣಿಸಲು ಕೋರಿದೆ.<br>(ii)ಆಪಾದಿತರು ತಮ್ಮ ಲಿಖಿತ ವಾದದಲ್ಲಿ 10 ನೇ ಆರೋಪದ ಬಗ್ಗೆ 2ನೇ ಆಪಾದಿತ ಅಧಿಕಾರಿಯವರ ಸಮರ್ಥನೆಃ ಜಿಲ್ಲಾ ಪಂಚಾಯತಿಯ ನಿರ್ಣಯದ ನಂತರ ಯೋಜನಾ ನಿರ್ದೇಶಕರು ಅರ್.ಸಿ.ಹೆಚ್ ನಿರ್ದೇಶಕರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪೂರ್ವಾನುಮತಿ ಪಡೆಯಬೇಕಾದ್ದಿಲ್ಲಿ ಅದನ್ನು ಆರೋಗ್ಯ ಇಲಾಖೆ ಅಧಿಕಾರಿಗಳು ಪಡೆಯಬೇಕಾಗಿತ್ತು. ಈ ಪ್ರಕರಣದಲ್ಲಿ ಆರೋಗ್ಯ ಇಲಾಖೆಯ ಅಧಿಕಾರಿಗಳ ಅನುಮತಿ ಪಡೆದಿರುವ ಬಗ್ಗೆ 2ನೇ ಆಪಾದಿತ ಆಧಿಕಾರಿಗೆ ಮಾಹಿತಿ ಇರುವುದಿಲ್ಲ.ಆದುದರಿಂದ ಈ ಆರೋಪವನ್ನು ನಿರಾಕರಿಸಲಾಗಿದೆ. ಎಂದು ತಿಳಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ 10ನೇ ಆರೋಪದ ಬಗ್ಗೆ ಪ್ರತ್ಯೇಕವಾದ ವಿಶ್ಲೇಷಣೆ ಇರುವುದಿಲ್ಲ. ಆದರಿಂದ ವಿಚಾರಣಾ ವರದಿಯು ದೋಷಪೂರಿತವಾಗಿದೆ. ಈ ಅಂಶವನ್ನು ಶಿಸ್ತು ಪ್ರಾಧಿಕಾರಿಯು ಪರಿಗಣಿಸಲು ಕೋರಿದೆ.<br>(iii) ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಖರೀದಿಯ ಬಗ್ಗೆ ಆರೋಗ್ಯ ಮತ್ತು ಕುಟಂಬ ಕಲ್ಯಾಣ ಇಲಾಖೆಯ ಅನುಮತಿ ಕೋರಲಾಗಿತ್ತುಃ ಜಿ.ಪಂ.ಬೀ.ಆ.ಶಾ.ಮುಕಾ.ಅ. 2001-02ರಲ್ಲಿ Amecrylate a bio adhesive ಖರೀದಿಯ ಬಗ್ಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅನುಮತಿ ಕೋರಲಾಗಿತ್ತು. | |

| | |
|---|---|
| ಆದರೆ ಸದರಿ ಇಲಾಖೆಯಿಂದ ಯಾವುದೇ ಉತ್ತರ ಬಂದಿರುವುದಿಲ್ಲ. ಈ ರೀತಿ ಪ್ರಸ್ತಾವನೆಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಯ ಸ್ಪಂದಿಸದೇ ಇರುವುದರಿಂದ ಹಾಗೂ ಆಯವ್ಯಯದ ಮೊಬಲಗು ದಿ:31-3-02ರಂದು ಲ್ಯಾಪ್ಸ್ ಆಗುವುದರಿಂದ ಮತ್ತು ಜಿಲ್ಲಾ ಪಂಚಾಯಿತಿಗೆ ಆುವ ನಷ್ಟವನ್ನು ತಡೆಗಟ್ಟಲು ಖರೀದಿಯನ್ನು ಮಾಡಲಾಗಿದೆ ಎಂದು ಮಂಡಿಸಿರುತ್ತಾರೆ. | These are the same contentions placed before the Enquiry Officer. Hence this cannot be considered as ground for appeal. |
| 4. ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಎಲಾ ಹತ್ತು ಆರೋಪಗಳ ಬಗ್ಗೆ: (1)ಈ ಪ್ರಕರಣದಲ್ಲಿ ಜಿಲ್ಲಾ ಪಂಚಾಯತ್ ಸ್ಥಾಹಿ ಸಮಿತಿಯ ಅನುಮೋದನೆ ಮೇರೆಗೆ ಸರ್ಕಾರದ ಸಂಸ್ಥೆಯ ಮೂಲಕ ಔಷಧಿ ಖರೀದಿ ಮಾಡಲಾಗಿದ್ದು ಔಷಧಿ ಸಂಪೂರ್ಣವಾಗಿ ಸರಬರಾಜು ಆದ ನಂತರ ಗುಣಮಟ್ಟ ಪರಿಶೀಲಿಸಿ ಹಣ ಪಾವತಿ ಮಾಡಿರುವ ಹಿನ್ನಲೆಯಲ್ಲಿ ಯಾವುದೇ ಹಣ ದುರುಪಯೋಗ ಮತ್ತು ವಂಚನೆಯಾಗಿಲ್ಲವೆಂದು ವಿಚಾರಣಾಧಿಕಾರಿಯಿವರ ಗಮನಕ್ಕೆ ತರಲಾಗಿದೆ ಎಂದು ತಿಳಿಸಲಾಗಿದೆ. ಈ ಅಂಶವನ್ನು ವಿಚಾರಣಾಧಿಕಾರಿಯವರು ನಮೂದಿಸಿ ವಿಶ್ಲೇಷಿಸಿ ಪರಿಗಣಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರಿಯು ಇದನ್ನು ಪರಿಗಣಿಸಲು ಕೋರಿದೆ. | These are the same contentions placed before the Enquiry Officer. Hence this cannot be considered as ground for appeal. |
| 5. ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಖರೀದಿಯ ಬಗ್ಗೆ ಸರ್ಕಾರದ ಅನುಮತಿ ಇರುವುದರಿಂದ ಯಾವುದೇ ದುರ್ನಡತೆ ಆಗಿರುವುದಿಲ್ಲ: ನಿಶಾನೆ ಪಿ-3ರಲ್ಲಿ ಸಾರ್ಕರದ ಆರ್ಥಿಕ ಇಲಾಖೆಯ Amecrylate a bia adhesive ಇದನ್ನು ಖರೀದಿಸಲು ಹಾಗೂ ಇದರ ಸಂಬಂಧ ಹಣ ವಿನಿಯೋಗಿಸಲು ಅನುಮತಿ ನೀಡಿದೆ. ಈ ರೀತಿ ಸರ್ಕಾರವೇ ಅನುಮೋದನೆ ನೀಡದಿದ್ದಲ್ಲಿ ಔಷಧಿಯನ್ನು ಖರೀದಿಸುವ ಪ್ರಶ್ನೆ ಉದ್ಭವಿಸುತ್ತಿರಲಿಲ್ಲ. 2001-02ನೇ ಸಾಲಿನಲ್ಲಿ ಒದಗಿಸಿರುವ ಒಟ್ಟಾರೆ ಆಯವ್ಯಯ ಉಳಿತಾಯದಲ್ಲಿ ಖರೀದಿಸಲು ಅನುಮತಿ ನೀಡಿರುವುದರಿಂದ ದಿ: 31-3-02ರೊಳಗೆ ಖರೀದಿಸುವುದು ಅನಿವಾರ್ಯವಾಗಿತ್ತು. ಆದ್ದರಿಂದ ಖರೀದಿಯಲ್ಲಿ ಯಾವುದೇ ದುರ್ನಡತೆಯಾಗಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಈ ಅಂಶವನ್ನು ವಿಚಾರಣಾಧಿಕಾರಿಯವರು ನಮೂದಿಸಿ ವಿಶ್ಲೇಷಿಸಿ ಪರಿಗಣಿಸದೇ ಇರುವುದರಿಂದ ಶಿಸ್ತು ಪ್ರಾಧಿಕಾರಿಯು ಇದನ್ನು ಪರಿಗಣಿಸಲು ಕೋರಿದೆ. | These are the same contentions placed before the Enquiry Officer. Hence this cannot be considered as ground for appeal. |
| 6. ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಸದ್ಭಾವನೆಯಿಂದ ತೆಗೆದುಕೊಂಡಿರುವ ಕ್ರಮಗಳು ದುರ್ನಡತೆ ಆಗುವುದಿಲ್ಲ: Amecrylate a bio Adhesive ಇದನ್ನು ಖರೀದಿಸುವ ನಿರ್ಣಯವನ್ನು ಕುಟುಂಬ ಯೋಜನಾ ಕ್ರಮಗಳನ್ನು ಅನುಸರಿಸುವ ಫಲಾನುಭವಿಗಳ ಆರೋಗ್ಯದ ದೃಷ್ಟಿಯಿಂದ ಜಿಲ್ಲಾ ಪಂಚಾಯತ್ ತೆಗೆದುಕೊಂಡಿದೆ. ಈ ಕ್ರಮಗಳಿಂದ ಸಾರ್ವಜನಿಕರಿಗೆ ಉಪಯೋಗವಾಗಿದೆ. ಅಧಿಕಾರಿಗಳು ಈ ಔಷಧಿಯನ್ನು ಖರೀದಿಸಿ ಹಣ ಪಾವತಿ ಮಾಡಿರುವುದು ಸಾಬೀತಾಗಿದೆ. ಸದ್ಭಾವನೆಯಿಂದ ತೆಗೆದುಕೊಂಡು ಕ್ರಮಗಳಿಗೆ ರಕ್ಷಣೆ ಇರುವುದರಿಂದ ಇದರಲ್ಲಿ ನ್ಯೂನ್ಯತೆಗಳಿದ್ದಲ್ಲಿ ಇದನ್ನು ಆಡಿಟ್ ಆಕ್ಷೇಪಣೆಯ ಮಾದರಿಯಲ್ಲಿ ಪರಿಗಣಿನಿ ಮುಕ್ತಾಯಗೊಳಿಸಬಹುದಾಗಿದೆ. ಎಂದು ತಿಳಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಈ ಅಂಶದ ಬಗ್ಗೆ ನಮೂದು ಹಾಗೂ | These are the same contentions placed before the Enquiry Officer. Hence this |

| | |
|---|---|
| ನಿರ್ಣಯಗಳು ದಾಖಾಲಾಗಿರುವುದಿಲ್ಲ .ಈ ಅಂಶವನ್ನು ಶಿಸ್ತು ಪ್ರಾಧಿಕಾರಿಯು ಪರಿಗಣಿಸಲು ಕೋರಿದೆ. | cannot be considered as ground for appeal. |
| 2. ವಿಧಿಸಿರುವ ದಂಡನೆಗಳ ಬಗ್ಗೆಃ Amycrylate A Bio Adhesive ಇದನ್ನು ಆಪಾದಿತರು ತಮ್ಮ ಉಪಯೋಗಕ್ಕಾಗಿ ಬಳಿಸಿರುವುದಿಲ್ಲ. ಸಾರ್ವಜನಿಕರಿಗೆ ಇಮನ್ನು ಬಳಸಿ ಸಾರ್ವಜನಿಕರು ಇದರ ಲಾಭವನ್ನು ಪಡೆದಿದ್ದಾರೆ. ಸದರಿ ಖರೀದಿಯ ಬಗ್ಗೆ ಜಲ್ಲಿ ಪಂಚಾಯಿತಿಯ ಶಿಕ್ಷಣ ಮತ್ತು ಸ್ಥಾಹಿ ಸಮಿತಿಯ ಅನುಮೋದನೆಯೊಂದಿಗೆ ಹಾಗೂ ಆರ್ಥಿಕ ಇಲಾಖೆಯ ಅನುಮೋದನೆಯೊಂದಿಗೆ ಖರೀದಿಸಿದ್ದು ಸದರಿ ಖರೀದಿಯ ಬಗ್ಗೆ ತಾಲ್ಲೂಕು ವೈದ್ಯಾಧಿಕಾರಿಗಳು ಹಾಗೂ ಇತರೇ ವೈದ್ಯಾಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆ. ಖರೀದಿಸಿರುವ Amcrylate A Bio-Adhesive ಇದು ವ್ಯರ್ಥವಾಗಿರುವುದಿಲ್ಲ. ಆದ್ದರಿಂದ ಸದರಿ ಖರೀದಿಯ ಬಗ್ಗೆ ನಿಯಮಗಳ ಪಾಲನೆಯಾಗಿಲ್ಲವೆಂಬ ಕಾರಣಕ್ಕಾಗಿ ಖರೀದಿ ಮಾಡಿರುವ Amcrylate A Bio-Adhesive ಇದರ ಮೊಬಲಗನ್ನು ಅಪೀಲುದಾರರಿಂದ ವಸೂಲು ಮಾಡುವುದು ನಿಯಮ ಬಾಹಿರವಾಗಿದೆ. ಈ ರೀತಿ ವಸೂಲು ಮಾಡಿದ್ದಲ್ಲಿ ಸದರಿ ಔಷಧಿಯನ್ನು ಅಪೀಲುದಾರರಿಗೆ ಹಿಂತಿರಿಗಿಸಬೇಕಾಗಿದೆ. ಆದ್ದಿರಿಂದ ವಿಧಿಸಿರುವ ದಂಡನೆಯು ಸಾಬೀತಾಗಿದೆ ಎಂದು ಹೇಳಲಾದ ದುರ್ನಡತೆಗೆ ವ್ಯತಿರಿಕ್ತವಾಗಿದೆ. ಇದರ ಬದಲು ದಂಡನಾದೇಶದ 4ನೇ ಪುಟದ 2ನೇ ಕಂಡಿಕೆಯಲ್ಲಿ ಸೂಚಿಸಿರುವಂತೆ ರೂಃ500/-ಗಳನ್ನು 3 ವರ್ಷಗಳವರೆಗೆ ವಿಶ್ರಾಂತಿ ವೇತನದಿಂದ ಕಡಿತಗೊಳಿಸುವ ದಂಡನೆಯು ಸೂಕ್ತ ರೂಪದ ಪ್ರಸ್ತಾವನೆಯಾಗುವುದು. ದಂಚನಾದೇಶವನ್ನು ರದ್ದುಪಡಿಸಲು ಸಾಧ್ಯವಾಗದಿದ್ದಲ್ಲಿ ಇದನ್ನು ಮಾರ್ಪಡಿಸಿ ರೂಃ500/-ಗಳನ್ನು 3 ವರ್ಷಗಳವರೆಗೆ ವಿಶ್ರಾಂತಿ ವೇತನದಿಂದ ಕಡಿತಗೊಳಿಸಲು ಆದೇಶಿಸಲು ಕೋರಲಾಗಿದೆ. | The appellant in this para has indirectly admitted the guilt by pleasing for a lesser punishment. She also contends that if the loss is recoverd then the material purchased should be returned to the appellant which is not acceptable under Rules. Just because the materials purchased have been subsequently utilized cannot cover up the lapse of the officer for not following the procedure. The penalty imposed by the Disciplinary Authority is therefore justified considering the gravity for misconduct of the appellant. |
| 3 ಖರೀದಿಯಲ್ಲಿ ನಿಯಮಗಳ ಭಾಗಶಃ ಪಾಲನೆಯು ದುರ್ನಡತೆ ಪದವ್ಯಾಪ್ತಿಯಲ್ಲಿ ಬರುವುದಿಲ್ಲಃ ಪ್ರಸ್ತುತ ಪ್ರಕರಣದಲ್ಲಿ ಬೀದರ್ ಜಿಲ್ಲಾ ಪಂಚಾಯತಿಯ ಶಿಕ್ಷಣ ಮತ್ತು ಸ್ಥಾಯೀ ಸಮಿತಿಯ ಅನುಮೋದನೆ ಹಾಗೂ ಆರ್ಥಿಕ ಇಲಾಖೆಯಿಂದ ಅನುಮೋದನೆ ಪಡೆದು Amcrylate A Bio Adhesive ಇದನ್ನು ಖರೀದಿಸಲಾಗಿದೆ. ಸದರಿ ಖರೀದಿಯಲ್ಲಿ ಭಾಗಶಃ ನಿಯಮಗಳ ಉಲಂಘನೆಯಾಗಿರುವುದಾಗಿ ಆಪಾದಿಸಲಾಗಿದೆ. ಇದು ದುರ್ನಡತೆಯ ಪದವ್ಯಾಪ್ತಿಯಲ್ಲಿ ಬರುವುದಿಲ್ಲ. ದುರ್ನಡತೆ ಪದವನ್ನು ನ್ಯಾಯಾಲಯವು ಈ ಕೆಳಗೆ ನಮೂದಿಸಿರುವಂತೆ ಅರ್ಥೈಸಿದೆ.<br>The word misconduct has been considered by the Supreme Court in State of Punjab and others V Ram Singh, Ex-Constable AIR 1992 SC 2188(At page 2191 in para 5).<br>5.Thus it could be seen that the word Misconduct though not capable of precise definition, on reflection receives its connotation from the context, the | The defence taken by tha appellant in this para is not correct, as flouting the rules knowingly cannot be an excuse. It can be considered as a serious lapse. Therefrore the misconduct of the officer as considered by the Disciplinary Authority has no error. In the circumstances, decision of the Diciplinary Authority is in accordance with Rules and natural justice. The various arguments made by the officer are one and the same which |

| | |
|---|---|
| deluqiency in its performance and its effect on the discipline and the nature of the duty, It may involve moral turpitude, it must be improper or wrong behaviour, unlawful behaviour willful in character forbidden act a transgression of established and definite rule of action or code of conduct but not mere error of judgement carelessness or negligence in performance of the duty: the act complained of bears forbidden quality or character. Its ambit has to be construed with reference to the subject matter and the context wherein the term occurs, regard being had to be scope of the statute and the public purpose it seeks to serve. | was placed before the Enquiry Officer. No new additional grounds has been adduced in her defence in this appeal. Therefore the appeal petition of the appellant has no merits and the same is liable to be rejected. |

ಮೇಲ್ಕಂಡ ವಾಸ್ತವಾಂಶಗಳನ್ನೊಳಗೊಂಡ ಮೇಲ್ಮನವಿ ಹಾಗೂ ಶಿಸ್ತು ಪ್ರಾಧಿಕಾರದ ಪರಿಶೀಲನಾ ಟಿಪ್ಪಣಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರವು ಈ ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 59 ಎಸ್‌ಇಎನ್ 2007, ಬೆಂಗಳೂರು ದಿನಾಂಕ: 14ನೇ ಫೆಬ್ರವರಿ 08**

**ORDER**

I have considered the appeal petition submitted by Smt.Dr.K.Sundaramma, Retired District Health Officer, Bidar under Rule 18 of KCS(CCA) Rules,1957 against the order dated 23-1-2007 of Government imposing the penalty of recovery of Rs.3,13,666.67 and reducing the pension by Rs.1,000/- for a period of five years, in the light of the contentions made in the appeal petition and the connected enquiry and appeal records.

This is a clear case of financial impropriety and the deliquent officer has herself admitted the guilt. I, therefore dismiss the appeal petition and uphold the orders of Government as the Disciplinary Authority.

Sd/-

**Rameshwar Thakur**

Governor of Karnataka

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ

ಪಿ.ಆರ್. 332

**ಹೆಚ್. ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

**ವಿಷಯ:** ಶ್ರೀ ಆರ್. ನಾರಾಯಣ್ ಕೆ.ಎ.ಎಸ್ ಅಧಿಕಾರಿ ಹಾಗೂ ಇತರೆ 08 ಜನ ಆರೋಪಿತರ ವಿರುದ್ಧ ಜಂಟಿ ಇಲಾಖಾ ವಿಚಾರಣೆ- ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ಬದಲಾಯಿಸಿ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂ: ಸಿಆಸುಇ 45 ಎಸ್‌ಇಎನ್ 06, ದಿ: 20-02-07.
2. ಶ್ರೀ ಆರ್. ನಾರಾಯಣ್ ಕೆ.ಎ.ಎಸ್ ಅಧಿಕಾರಿ ಇವರ ದಿ: 14-03-2007 ರ ಉತ್ತರ.
3. ಶ್ರೀ ಸಿ. ದೇವೇಗೌಡ, ಹಿಂದಿನ ಗ್ರಾಮ ಲೆಕ್ಕಿಗರು ಹಾಲಿ ಪ್ರಥಮ ದರ್ಜೆ ಸಹಾಯಕ, ತಾಲ್ಲೂಕು ಕಛೇರಿ, ತಿಪಟೂರು ಇವರ ದಿ: 26-06-07 ರ ಉತ್ತರ.
4. ಶ್ರೀ ಕೆ. ಯಲ್ಲಯ್ಯ, ಹಿಂದಿನ ಗ್ರಾಮ ಲೆಕ್ಕಿಗರು ಹಾಲಿ ನಿವೃತ್ತ ಉಪ ತಹಸಿಲ್ದಾರ್ ಇವರ ದಿ: 4-2007 ರ ಉತ್ತರ.
5. ಶ್ರೀ ಚಿಂತಾಮಣಿ, ಹಿಂದಿನ ಗ್ರಾಮ ಲೆಕ್ಕಿಗರು ಹಾಲಿ ಕಂದಾಯ ನಿರೀಕ್ಷಕ,ಕಸಬಾ ಹೋಬಳಿ ಚಿಕ್ಕನಾಯಕನಹಳ್ಳಿ ಇವರ ದಿ:11-04-07 ರ ಉತ್ತರ.
7. ಶ್ರೀ ಮಹಮದ್ ಅಲ್ತಾಫ್ ಪಾಷಾ, ಹಿಂದಿನ ರಾಜಸ್ವ ನಿರೀಕ್ಷಕರು ಹಾಲಿ ಉಪ ತಹಸಿಲ್ದಾರ್, ಕುಣಿಗಲ್ ತಾಲ್ಲೂಕು ಇವರ ದಿ:19-06-07 ರ ಉತ್ತರ.

8. ಶ್ರೀ ಡಿ. ಶಿವರಾಮಯ್ಯ, ಹಿಂದಿನ ಗ್ರಾಮ ಲೆಕ್ಕಿಗರು ಹಾಲಿ ಉಪ ತಹಸಿಲ್ದಾರ್, ದಂಡಿನಶಿವರ, ನಾಡಕಛೇರಿ ಇವರ ದಿ:26-06-07 ರ ಉತ್ತರ.
9. ಸರ್ಕಾರಿ ಆದೇಶ ಸಂ: ಸಿಆಸುಇ 43 ಎಸ್ಇಎನ್ 06 (ಸಿಆಸುಇ 75 ಕೆಇವಿ 07) ದಿ: 28-9-2007.
10. ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ರವರ ಮನವಿ ದಿ: 9/11-10-07.

**ಪ್ರಸ್ತಾವನೆ:**

ಶ್ರೀ ಆರ್. ನಾರಾಯಣ್ ಕೆ.ಎ.ಎಸ್ ಅಧಿಕಾರಿ, ಶ್ರೀ ಕೆ. ನಾರಾಯಣಸ್ವಾಮಿ, ಶ್ರೀ ಎನ್.ಹೆಚ್. ಸದಾಶಿವರಾವ್, ಶ್ರೀ ಮಾಹಿಮುದ್ದೀನ್, ಶ್ರೀ ಮಹ್ಮದ್ ಅಲ್ತಫ್ ಪಾಷಾ ಶ್ರೀ ಸಿ. ದೇವೇಗೌಡ, ಶ್ರೀ ಕೆ. ಯಲ್ಲಯ್ಯ, ಶ್ರೀ ಚಿಂತಾಮಣಿ ಶ್ರೀ ಡಿ. ಶಿವರಾಮಯ್ಯ ಇವರುಗಳು ಚಿಕ್ಕನಾಯಕನಹಳ್ಳಿ ತಾಲ್ಲೂಕು ಕಛೇರಿಯಲ್ಲಿ ಕ್ರಮವಾಗಿ ತಹಸಿಲ್ದಾರ್, ರಾಜಸ್ವ ನಿರೀಕ್ಷಕ, ಗ್ರಾಮ ಲೆಕ್ಕಿಗರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಹಲವು ಗ್ರಾಮಗಳಲ್ಲಿ ಸರ್ಕಾರಿ ಜಮೀನುಗಳನ್ನು ಕಾನೂನು ಬಾಹಿರವಾಗಿ ಮಂಜೂರು ಮಾಡಿರುವರೆಂಬ ಆರೋಪದ ಸಂಬಂಧ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಾವಳಿ 1957ರ ನಿಯಮ 11 ಮತ್ತು 11ಎ ರನ್ವಯ ನೋಟೀಸ್ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ದ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಸದರಿ ಅಧಿಕಾರಿಗಳು : ನೌಕರರು ಮೇಲೆ ಕ್ರಮ ಸಂಖ್ಯೆ (2) ರಿಂದ (7) ರಲ್ಲಿ ಓದಲಾದ ದಿನಾಂಕಗಳಲ್ಲಿ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ.ಉಳಿದಂತೆ ಆಪಾದಿತ ನೌಕರರುಗಳಾದ ಶ್ರೀ ಸದಾಶಿವರಾವ್, ಶ್ರೀ ಮಾಹಿಮುದ್ದೀನ್ ಮತ್ತು ಶ್ರೀ ನಾರಾಯಣಸ್ವಾಮಿ ಇವರುಗಳು ಸರ್ಕಾರದಿಂದ ಜಾರಿಗೊಳಿಸಲಾಗಿದ್ದ ನೋಟೀಸ್‌ಗೆ ನಿಗಧಿತ ಅವಧಿಯೊಳಗೆ ಯಾವುದೇ ವಿವರಣೆ ನೀಡಿರುವುದಿಲ್ಲ. ಆದ್ದರಿಂದ ಅಪಾದಿತರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ಮೇಲೆ ಓದಲಾದ ಕ್ರಮ ಸಂ: (9)ರ ಸರ್ಕಾರಿ ಆದೇಶದಲ್ಲಿ ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ರವರನ್ನು ವಿಚಾರಣಾಧಿಕಾರಿಯಾಗಿ ಮತ್ತು ತಹಸಿಲ್ದಾರ್, ಚಿಕ್ಕನಾಯಕನಹಳ್ಳಿ ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿತ್ತು. ಆದರೆ ಮೇಲೆ ಓದಲಾದ ಕ್ರಮ ಸಂ:(10)ರ ಪತ್ರದಲ್ಲಿ ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ರವರು ವೈಯಕ್ತಿಕ ಕಾರಣಗಳಿಂದಾಗಿ ಈ ವಿಚಾರಣೆ ನಡೆಸಲು ಸಾಧ್ಯವಾಗುತ್ತಿಲ್ಲವೆಂದು ತಿಳಿಸಿರುವುದರಿಂದ ಜಂಟಿ ಇಲಾಖಾ ವಿಚಾರಣೆ ನಡೆಸಲು ಬದಲಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಎಸ್ಇಎನ್ 2005 (ಸಿಆಸುಇ 75 ಕೆಇವಿ 2007),**
**ಬೆಂಗಳೂರು ದಿನಾಂಕ: 29ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಾವಳಿ 1957ರ ನಿಯಮ 11(2) ರನ್ವಯ ನಿಯಮ 13 ನ್ನು ಓದಿಕೊಂಡಂತೆ ಸರ್ಕಾರವು ಶ್ರೀ ಅರ್. ನಾರಾಯಣ್ ಕೆ.ಎ.ಎಸ್ ಅಧಿಕಾರಿ ಹಿಂದಿನ ತಹಸಿಲ್ದಾರ್ ಚಿಕ್ಕನಾಯಕನಹಳ್ಳಿ, ಶ್ರೀ ಕೆ. ನಾರಾಯಣಸ್ವಾಮಿ, ಹಿಂದಿನ ಪ್ರಥಮ ದರ್ಜೆ ಸಹಾಯಕ, ಶ್ರೀ ಎನ್.ಹೆಚ್. ಸದಾಶಿವರಾವ್, ಹಿಂದಿನ ರಾಜಸ್ವ ನಿರೀಕ್ಷಕ, ಶ್ರೀ ಮಾಹಿಮುದ್ದೀನ್, ಹಿಂದಿನ ರಾಜಸ್ವ ನಿರೀಕ್ಷಕ, ಶ್ರೀ ಮಹ್ಮದ್‌ಅಲ್ತಫ್ ಪಾಷಾ, ಹಿಂದಿನ ರಾಜಸ್ವ ನಿರೀಕ್ಷಕ, ಶ್ರೀ ಸಿ. ದೇವೇಗೌಡ, ಹಿಂದಿನ ಗ್ರಾಮ ಲೆಕ್ಕಿಗ, ಶ್ರೀ ಕೆ. ಯಲ್ಲಯ್ಯ, ಹಿಂದಿನ ಗ್ರಾಮ ಲೆಕ್ಕಿಗ, ಶ್ರೀ ಚಿಂತಾಮಣಿ, ಹಿಂದಿನ ಗ್ರಾಮ ಲೆಕ್ಕಿಗ, ಶ್ರೀ ಡಿ. ಶಿವರಾಮಯ್ಯ, ಹಿಂದಿನ ಗ್ರಾಮ ಲೆಕ್ಕಿಗ ತಾಲ್ಲೂಕು ಕಛೇರಿ, ಚಿಕ್ಕನಾಯಕನಹಳ್ಳಿ ಅವರುಗಳ ವಿರುದ್ದ ಮಾಡಲಾದ ಆರೋಪಗಳ ಕುರಿತು ಜಂಟಿ ಇಲಾಖಾ ವಿಚಾರಣೆ ನಡೆಸಲು ದಿ: 28-9-07ರ ಸರ್ಕಾರಿ ಆದೇಶದಲ್ಲಿ ವಿಚಾರಣಾಧಿಕಾರಿಯಾಗಿ ನೇಮಿಸಲಾದ ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ರವರ ಬದಲಿಗೆ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ. ವಿಚಾರಣಾಧಿಕಾರಿಗಳು ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿ: 28-9-07ರ ಸರ್ಕಾರಿ ಆದೇಶದಲ್ಲಿ ಮಂಡನಾಧಿಕಾರಿಯಾಗಿ ನೇಮಿಸಲಾದ ತಹಸಿಲ್ದಾರ್, ಚಿಕ್ಕನಾಯಕನಹಳ್ಳಿರವರ ಬದಲಿಗೆ ಬೆಂಗಳೂರು ವಿಭಾಗದ ಪ್ರಾದೇಶಿಕ ಆಯುಕ್ತರ ಕಛೇರಿಯ ತಹಸಿಲ್ದಾರರು (ಕಂದಾಯ) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ವಿಚಾರಣೆಯನ್ನು 3 ತಿಂಗಳೊಳಗೆ ಮುಗಿಸಿ ವರದಿ ಸಲ್ಲಿಸುವಂತೆ ಆದೇಶಿಸಲಾಗಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ

ಪಿ.ಆರ್. 208

**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು-2)

**ವಿಷಯಃ** ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್ (ಸೂಪರ್ ಟೈಂ ಸ್ಕೇಲ್) ಅಧಿಕಾರಿ (ನಿ) ಹಿಂದಿನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ತುಮಕೂರು ರವರ ವಿರುದ್ದ ಇಲಾಖಾ ವಿಚಾರಣೆ- ಮಂಡನಾಧಿಕಾರಿಯನ್ನು ಬದಲಾಯಿಸಿ ನೇಮಕ ಮಾಡಲು ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆಃ**
1. ಸರ್ಕಾರಿ ಆದೇಶ ಸಂಃ ಸಿಆಸುಇ 291 ಕೆಇವಿ 2007, ದಿಃ 29-8-07 ಮತ್ತು 18-12-07.
2. ತಿದ್ದುಪಡಿ ಆದೇಶ ಸಂಃ ಸಿಆಸುಇ 291 ಕೆಇವಿ 2007, ದಿಃ 27-12-2007.
3. ಉಪ ಕಾರ್ಯದರ್ಶಿ(ಅಭಿವೃದ್ದಿ) ಜಿಲ್ಲಾ ಪಂಚಾಯತ್ ತುಮಕೂರು ರವರ ಪತ್ರ ಸಂಃ ಉ.ಕಾ. (ಆಪ್ತ ಶಾಖೆ) ವಿವಃ 01ಃ 07-08 ದಿಃ 27-12-2007

**ಪ್ರಸ್ತಾವನೆಃ**

ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್ (ಸೂಪರ್ ಟೈಂ ಸ್ಕೇಲ್) ಅಧಿಕಾರಿ (ನಿ) ರವರು ತುಮಕೂರು ಜಿಲ್ಲಾ ಪಂಚಾಯತ್, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿ 2006-07 ನೇ ಸಾಲಿನಲ್ಲಿ ಕಾರ್ಯನಿರ್ವಹಿಸುತ್ತಿದಾಗ ಸಾರ್ವಜನಿಕ ಕುಡಿಯುವ ನೀರಿನ ಯೋಜನೆಯಡಿ ಹಣ ದುರುಪಯೋಗ ಮಾಡಿರುವುದು ಮತ್ತು ಯೋಜನೆಯ ಬಾಬ್ತಿನಲ್ಲಿ ಚಾಲ್ತಿಯಲ್ಲಿರುವ ಮಾರ್ಗದರ್ಶನವನ್ನು ಉಲ್ಲಂಘನೆ ಮಾಡಿರುವ 05 ಆರೋಪಗಳ ಸಂಬಂಧ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿಃ 29-8-07 ರ ಸರ್ಕಾರಿ ಆದೇಶದಲ್ಲಿ ಇವರ ವಿರುದ್ದದ ಇಲಾಖಾ ವಿಚಾರಣೆಯಲ್ಲಿ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಉಪ ಕಾರ್ಯದರ್ಶಿ (ಅಭಿವೃದ್ದಿ) ಜಿಲ್ಲಾ ಪಂಚಾಯತ್, ತುಮಕೂರು ರವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು. ಹಾಗೂ ವಿಚಾರಣಾಧಿಕಾರಿಯನ್ನು ಬದಲಾಯಿಸಿ ಹೊರಡಿಸಿರುವ ದಿಃ 18-12-07ರ ಆದೇಶದಲ್ಲಿ ಉಪ ಕಾರ್ಯದರ್ಶಿ (ಆಡಳಿತ) ಜಿಲ್ಲಾ ಪಂಚಾಯತ್, ತುಮಕೂರು ಇವರೇ ಮಂಡನಾಧಿಕಾರಿಯಾಗಿ ಮುಂದುವರೆಯಲಿದ್ದಾರೆಂದು ತಪ್ಪಾಗಿ ತಿಳಿಸಲಾಗಿತ್ತು. ಆದಕಾರಣ ಮೇಲೆ ಕ್ರಮ ಸಂಃ (2)ರಲ್ಲಿ ಓದಲಾದ ತಿದ್ದುಪಡಿ ಆದೇಶದಲ್ಲಿ ಉಪ ಕಾರ್ಯದರ್ಶಿ (ಆಡಳಿತ) ಎಂದಿರುವುದನ್ನು ಉಪ ಕಾರ್ಯದರ್ಶಿ(ಅಭಿವೃದ್ದಿ) ಎಂದು ತಿದ್ದಿಕೊಂಡು ಓದಿಕೊಳ್ಳಲು ಆದೇಶಿಸಲಾಗಿತ್ತು. ಉಪ ಕಾರ್ಯದರ್ಶಿ(ಅಭಿವೃದ್ದಿ) ಜಿಲ್ಲಾ ಪಂಚಾಯತ್ ತುಮಕೂರು ರವರು ಮೇಲೆ ಕ್ರಮ ಸಂಃ(3)ರಲ್ಲಿ ಓದಲಾದ ಪತ್ರದಲ್ಲಿ ಸದರಿ ಪ್ರಕರಣದಲ್ಲಿ ಉಪ ಕಾರ್ಯದರ್ಶಿ (ಅಭಿವೃದ್ದಿ) ಜಿಲ್ಲಾ ಪಂಚಾಯತ್, ತುಮಕೂರುರವರೇ ಸಾಕ್ಷಿದಾರರಾಗಿದ್ದು ಅವರನ್ನೇ ಮಂಡನಾಧಿಕಾರಿಯಾಗಿ ನೇಮಿಸಲಾಗಿದ್ದು, ಒಂದೇ ಪ್ರಕರಣದಲ್ಲಿ ಮಂಡನಾಧಿಕಾರಿ ಹಾಗೂ ಸಾಕ್ಷಿದಾರನಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗದ ಕಾರಣ ಸರ್ಕಾರದ ಸ್ಪಷ್ಟ ನಿರ್ದೇಶನ ಕೋರಿದ್ದಾರೆ. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಉಪ ಕಾರ್ಯದರ್ಶಿ(ಆಡಳಿತ), ಜಿಲ್ಲಾ ಪಂಚಾಯತ್, ತುಮಕೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ನಿರ್ಣಯಿಸಿದೆ. ಅದರಂತೆ ಈ ಆದೇಶಃ

**ಸರ್ಕಾರಿ ಆದೇಶ ಸಂಃ ಸಿಆಸುಇ 291 ಕೆಇವಿ 2007 ಬೆಂಗಳೂರು ದಿಃ11ನೇ ಜನವರಿ 08**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್ (ಸೂಪರ್ ಟೈಂ ಸ್ಕೇಲ್) ಅಧಿಕಾರಿ (ನಿ) ಇವರ ವಿರುದ್ದ ಮಾಡಲಾದ ಆರೋಪಗಳ ಕುರಿತು ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಉಪ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ತುಮಕೂರು ರವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಲಾಗಿದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸತಕ್ಕದ್ದು.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 145

**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು-2).

**ವಿಷಯಃ** ಶ್ರೀ ಮೀರ್ ಅನೀಸ್ ಅಹಮದ್, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ ಹಿಂದಿನ ಭೂಸ್ವಾಧೀನಾಧಿಕಾರಿ, ಹೇಮಾವತಿ ನಾಲಾ ವಲಯ ತುಮಕೂರು ರವರ ವಿರುದ್ದ ಇಲಾಖಾ ವಿಚಾರಣೆ- ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಒದಲಾಗಿದೆಃ**
1. ನೋಟೀಸ್ ಸಂಃ ಸಿಆಸುಇ 240 ಎಸ್ಇಎನ್ 90, ದಿಃ 25-08-2005.
2. ಶ್ರೀ ಮೀರ್ ಅನ್ನೀಸ್ ಅಹಮದ್, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ ಹಿಂದಿನ ಭೂಸ್ವಾಧೀನಾಧಿಕಾರಿ, ಹೇಮಾವತಿ ನಾಲಾ ವಲಯ ತುಮಕೂರು ರವರ ದಿಃ 10-10-05 ಉತ್ತರ.

**ಪ್ರಸ್ತಾವನೆಃ**

ಶ್ರೀ ಮೀರ್ ಅನೀಸ್ ಅಹಮದ್, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ ರವರು ಹೇಮಾವತಿ ನಾಲಾ ವಲಯ, ತುಮಕೂರು ರಲ್ಲಿ ವಿಶೇಷ ಭೂಸ್ವಾದೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದು ಅವಧಿಯಲ್ಲಿ ದಿಃ 01-10-88 ರಿಂದ ಜಾರಿಗೆ ಬರುವಂತೆ ಶ್ರೀ ಜಾಕೀರ್ ಆಲಿ ಖಾನ್ ಎಂಬ ದಿನಗೂಲಿ ಬೆರಳಚ್ಚುಗಾರರನ್ನು ಅನಧಿಕೃತವಾಗಿ ದಿನಗೂಲಿ ಆಧಾರದ ಮೇಲೆ ಬೆರಳಚ್ಚುಗಾರರನ್ನಾಗಿ ನೇಮಿಸಿಕೊಂಡು ಸರ್ಕಾರದ ಆದೇಶಗಳನ್ನು ಉಲ್ಲಂಘಿಸಿರುವ ಹಾಗೂ ಸರ್ಕಾರಕ್ಕೆ ಅನಗತ್ಯ ವೆಚ್ಚ ಮತ್ತು ನಷ್ಟ ಉಂಟು ಮಾಡಿರುವ ಆರೋಪದ ಸಂಬಂಧ

ಅವರಿಗೆ ಮೇಲೆ (1)ರಲ್ಲಿ ಓದಲಾದ ದಿಃ 25-8-05 ರ ನೋಟಿಸನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11 ಮತ್ತು 11-ಎ ರನ್ವಯ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ದ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ನೋಟೀಸಿಗೆ ಸದರಿ ಅಧಿಕಾರಿಯು ಮೇಲೆ (2)ರಲ್ಲಿ ಓದಲಾದ ದಿಃ 10-10-05ರಲ್ಲಿ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಅವರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸಿಸುತ್ತದೆಃ

**ಸರ್ಕಾರಿ ಆದೇಶ ಸಂಃ ಸಿಆಸುಇ 200 ಕೇಇವಿ 2007 ಬೆಂಗಳೂರು ದಿಃ 5 ನೇ ಫೆಬ್ರವರಿ 08**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಮೀರ್ ಅನೀಸ್ ಅಹಮದ್, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ ಇವರ ವಿರುದ್ದ ಮಾಡಲಾದ ಆರೋಪಗಳ ಕುರಿತು ವಿಚಾರಣೆ ನಡೆಸಲು ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಿಜಿಸ್ಟ್ರಾರ್, ಮುಖ್ಯ ಅಭಿಯಂತರರ ಕಛೇರಿ, ಹೇಮಾವತಿ ನಾಲಾ ಯೋಜನೆ ಗೊರೂರು, ಹಾಸನ ಜಿಲ್ಲೆ ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 238

**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ(ಸೇವೆಗಳು-2).

**ವಿಷಯಃ** ಶ್ರೀ ಎಸ್.ತಹಸೀನ್ ಅಹಮದ್, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ ಹಾಗೂ ಶ್ರೀ ಸಿದ್ದಪ್ಪ, ಸಹಾಯಕ, ಜಲಸಂಪನ್ಮೂಲ ಇಲಾಖೆ, ಇವರುಗಳ ವಿರುದ್ದ ಇಲಾಖಾ ವಿಚಾರಣೆ - ಶ್ರೀ ಎಸ್. ತಹಸೀನ್ ಅಹಮದ್, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿರವರಿಗೆ ಸಂಬಂಧಿಸಿದಂತೆ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆಃ**
1. ಸರ್ಕಾರಿ ಆದೇಶ ಸಂಃ ಸಿಆಸುಇ 217 ಎಸ್ಇಎನ್ 06 ದಿಃ 07.04.2007.
2. ಶ್ರೀ. ಎಸ್. ಇಂದುಧರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರ ವಿಚಾರಣಾ ವರದಿ ದಿಃ 06-07-07.
3. ಸರ್ಕಾರಿ ಆದೇಶ ಸಂಃಸಿಆಸುಇ 217 ಎಸ್ಇಎನ್ 06, ದಿಃ 24.08.2007.

**ಪ್ರಸ್ತಾವನೆಃ**

ಕರ್ನಾಟಕ ಸರ್ಕಾರದ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ಶ್ರೀ ಎಸ್. ತಹಸೀನ್ ಅಹಮದ್, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರು ಉಪಕಾರ್ಯದರ್ಶಿ(ಸೇವೆಗಳು) ಹುದ್ದೆಯಲ್ಲಿ ಹಾಗೂ ಶ್ರೀ ಸಿದ್ದಪ್ಪ, ಸಹಾಯಕ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಎಸ್.ಎಸ್.ಎಲ್.ಸಿ ವಿದ್ಯಾರ್ಹತೆ ಹೊಂದಿದ ಸೌಡಿ, ನೀರುಗಂಟಿ, ವಾಟರ್ ಬಾಯ್ ಮತ್ತು ಪಾಟಕಾರಿಗಳಾಗಿ ಸೂಪರ್‌ನ್ಯೂಮರಿ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದ ಗ್ರೂಪ್-ಡಿ ನೌಕರರನ್ನು ಗ್ರೂಪ್-ಸಿ ವೃಂದಕ್ಕೆ, ಸಿ.ಅ.ಸು.ಇ (ಸೇವಾ ನಿಯಮಗಳು) ಮತ್ತು ಆರ್ಥಿಕ ಇಲಾಖೆಗಳ ಸಹಮತಿಯನ್ನು ಪಡೆಯದೆ ಸಮನಾಂತರೀಕರಿಸಿ ಸಿ.ಅ.ಸು.ಇ (ಸೇವಾ ನಿಯಮಗಳು) ಹೊರಡಿಸಿರುವ ಆದೇಶ/ನಿಯಮಗಳಿಗೆ ವ್ಯತಿರಿಕ್ತವಾಗಿ ದಿಃ 03-06-01 ರ ಸರ್ಕಾರಿ ಆದೇಶ ಹೊರಡಿಸಿರುವ ಅರೋಪಗಳ ಸಂಬಂಧ ವಿಚಾರಣೆ ನಡೆಸಲು ಮೇಲೆ (1) ರಲ್ಲಿಓದಲಾದ ದಿಃ07-04-07 ರ ಆದೇಶದಲ್ಲಿ ಶ್ರೀ ಎಸ್. ಇಂದುಧರ್ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂಃ (2)ರಲ್ಲಿ ಓದಲಾದ ದಿಃ06-07-07ರ ಪತ್ರದೊಂದಿಗೆ ವಿಚಾರಣೆ ವರದಿಯನ್ನು ಸಲ್ಲಿಸಿ ಶ್ರೀ ಎಸ್. ತಹಸೀನ್ ಅಹಮದ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ದ ಮಾಡಲಾದ ಆರೋಪವು ಸಾಬೀತಾಗಿದೆಯೆಂದು ಹಾಗೂ ಶ್ರೀ ಸಿದ್ದಪ್ಪ, ಸಹಾಯಕ ಅವರ ವಿರುದ್ದ ಮಾಡಲಾದ ಆರೋಪವು ಸಾಬೀತಾಗಿಲ್ಲವೆಂದು ತಿಳಿಸಿರುತ್ತಾರೆ. ಅದರಂತೆ ಶ್ರೀ ಎಸ್. ತಹಸೀನ್ ಅಹಮದ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿಗೆ ವಿಚಾರಣಾ ವರದಿಯ ಪ್ರತಿಯೊಂದಿಗೆ ಎರಡನೇ ಕಾರಣ ಕೇಳುವ ನೋಟೀಸ್ ನೀಡಿ ಆ ಬಗ್ಗೆ ಅವರ ಅಹವಾಲು ಏನಾದರೂ ಇದ್ದಲ್ಲಿ 15 ದಿನದೊಳಗೆ ಸರ್ಕಾರಕ್ಕೆ ಸಲ್ಲಿಸಲು ತಿಳಿಸಲಾಗಿತ್ತು. ಹಾಗೆಯೇ ಶ್ರೀ ಸಿದ್ದಪ್ಪ, ಸಹಾಯಕ ಅವರ ವಿರುದ್ದ ಮಾಡಲಾದ ಆರೋಪವು ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ನೀಡಿದ ನಿರ್ಣಯದ ಮೇರೆಗೆ ಮೇಲೆ ಕ್ರಮ ಸಂಃ (3) ರಲ್ಲಿ ಓದಲಾದ

ಸರ್ಕಾರಿ ಆದೇಶದಲ್ಲಿ ಇವರನ್ನು ಅರೋಪದಿಂದ ಮುಕ್ತರನ್ನಾಗಿಸಿ ಇನ್ನು ಮುಂದೆ ಕಛೇರಿ ಕೆಲಸದಲ್ಲಿ ನಿರ್ಲಕ್ಷತೆಯನ್ನು ತೋರಬಾರದೆಂದು ತೀವ್ರವಾದ ಎಚ್ಚರಿಕೆಯನ್ನು ನೀಡಲಾಗಿದೆ.

ಈ ಮಧ್ಯೆ, ಶ್ರೀ ಎಸ್. ತಹಸೀನ್ ಅಹಮದ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಇವರು ಸರ್ಕಾರದಿಂದ ಜಾರಿಗೊಳಿಸಲಾಗಿದ್ದ ಎರಡನೇ ಕಾರಣ ಕೇಳುವ ನೋಟಿಸಿಗೆ ತಮ್ಮ ಲಿಖಿತ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿ ತಾವು ಈ ಪ್ರಕರಣದಲ್ಲಿ ಮಂಡಿಸಿದ ಟಿಪ್ಪಣಿಯನ್ನು ಕಾರ್ಯದರ್ಶಿರವರು ಒಪ್ಪದೇ ಪಾಟಕಾರಿಗಳು ಈಗಿರುವ ಹುದ್ದೆಯಲ್ಲೇ ಮುಂದುವರಿಯುವುದು ಸೂಕ್ತವಾಗಿರುತ್ತದೆಂಬ ಇತ್ಯಾದಿ ಟಿಪ್ಪಣಿಯೊಂದಿಗೆ ಕಡತವನ್ನು ಮಂಡಿಸಿ ನಂತರ ಮಾನ್ಯ ಸಚಿವರ ಸೂಚನೆಯಂತೆ ಕಾರ್ಯದರ್ಶಿಯವರು ಸಚಿವರೊಂದಿಗೆ ಚರ್ಚಿಸಿ ಅವರ ಅನುಮೋದನೆ ಪಡೆದು ಪ್ರಶ್ನಿತ ಆದೇಶವನ್ನು ಹೊರಡಿಸಲು ಕಾರಣರಾಗಿರುತ್ತಾರೆಂದು ಹಾಗೂ ಈ ಯಾವುದೇ ಹಂತದಲ್ಲಿ ತಮಗೆ ಕಡತ ಹಿಂದಿರುಗಿ ಬಾರದ ಕಾರಣ ನಮ್ಮನ್ನು ಪ್ರಶ್ನಿತ ಆದೇಶಕ್ಕೆ ಜವಾಬ್ದಾರನನ್ನಾಗಿ ಮಾಡುವುದು ಸಮಂಜಸವಲ್ಲವೆಂದು ಹಾಗೂ ದಿಃ 30-06-01 ರಂದು ಹೊರಡಿಸಿರುವ ಪ್ರಶ್ನಿತ ಆದೇಶವನ್ನು ಜಲಸಂಪನ್ಮೂಲ ಇಲಾಖೆಯು ಹಿಂದಕ್ಕೆ ಪಡೆದು ಸಂಬಂದಪಟ್ಟ ನೌಕರರಿಗೆ ನೀಡಿರುವ ಆರ್ಥಿಕ ಸೌಲಭ್ಯಗಳನ್ನು ವಸೂಲು ಮಾಡಲಾಗುತ್ತಿರುವುದಾಗಿ ತಿಳಿಸಿ ತಮ್ಮನ್ನು ಆರೋಪಗಳಿಂದ ಮುಕ್ತಿಗೊಳಿಸುವಂತೆ ಕೋರಿರುತ್ತಾರೆ.

ಮೇಲ್ಕಂಡ ಕಾರಣಗಳಿಂದಾಗಿ ಆಪಾದಿತರಾದ ಶ್ರೀ ಎಸ್. ತಹಸೀನ್ ಅಹಮದ್ ಇವರಿಗೆ ಸಂಬಂಧಿಸಿದಂತೆ ವಿಚಾರಣಾಧಿಕಾರಿಗಳು ನೀಡಿರುವ ವರದಿಯನ್ನು ಒಪ್ಪದೇ ನೈಸರ್ಗಿಕ ನ್ಯಾಯ ದೃಷ್ಟಿಯಿಂದ ಆಪಾದಿತ ಅಧಿಕಾರಿ ನೀಡಿರುವ ವಿವರಣೆಯನ್ನು ಒಪ್ಪಿ ಇನ್ನು ಮುಂದೆ ಇಂತಹ ಲೋಪಗಳಿಗೆ ಅವಕಾಶ ಕೊಡಬಾರದೆಂಬ ತೀವ್ರ ಎಚ್ಚರಿಕೆಯನ್ನು ನೀಡಿ ಅವರನ್ನು ಆರೋಪಮುಕ್ತರನ್ನಾಗಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ 295 ಕೆಇವಿ 2007, ಬೆಂಗಳೂರು ದಿನಾಂಕಃ 27ನೇ ಡಿಸೆಂಬರ್ 07**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ಎಸ್. ತಹಸೀನ್ ಅಹಮದ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಅವರನ್ನು ದಿಃ 09-10-2006ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ. ಹಾಗೂ ಇನ್ನು ಮುಂದೆ ಕಛೇರಿ ಕೆಲಸದಲ್ಲಿ ಈ ರೀತಿ ನಿರ್ಲಕ್ಷತೆಯನ್ನು ತೋರಬಾರದೆಂದು ತೀವ್ರವಾಗಿ ಈ ಮೂಲಕ ಎಚ್ಚರಿಕೆಯನ್ನು ನೀಡಲಾಗಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ

ಪಿ.ಆರ್. 101

**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು-2)

**ವಿಷಯಃ** ಶ್ರೀ ಜೆ.ಆರ್. ಲೋಬೋ ಕೆ.ಎ.ಎಸ್ (ಹಿ.ಶ್ರೇ)ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ- ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆಃ**
1. ನೋಟೀಸ್ ಸಂಃ ಸಿಆಸುಇ 141 ಎಸ್‌ಇಎನ್ 05, ದಿಃ 02-02-06.
2. ಶ್ರೀ ಜೆ.ಆರ್. ಲೋಬೋ, ಕೆ.ಎ.ಎಸ್ ಅಧಿಕಾರಿ ರವರ ಲಿಖಿತ ಹೇಳಿಕೆ ದಿಃ 08-03-06.
3. ಸರ್ಕಾರ ಆದೇಶ ಸಂಃಸಿಆಸುಇ 141 ಎಸ್‌ಇಎನ್ 05, ದಿಃ 29.01.2007.
4. ಶ್ರೀ ಹೆಚ್. ಉಮೇಶ್ ಶೆಟ್ಟಿ ನಿವೃತ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರು ಇವರ ವಿಚಾರಣಾ ವರದಿ ದಿನಾಂಕಃ 07-07-07.

**ಪ್ರಸ್ತಾವನೆಃ**

ಶ್ರೀ ಜೆ.ಆರ್. ಲೋಬೋ ಕೆ.ಎ.ಎಸ್ (ಹಿ.ಶ್ರೇ) ಅಧಿಕಾರಿರವರು ಮಂಗಳೂರು ಮಹಾನಗರಪಾಲಿಕೆ ಆಯುಕ್ತರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಸರ್ಕಾರದ ಮಂಜೂರಾತಿಯನ್ನು ಪಡೆಯದೇ ಮಂಗಳೂರು ಮಹಾನಗರ ಪಾಲಿಕೆಯ 64 ಮಂದಿ ಬದಲಿ ಪೌರ ಕಾರ್ಮಿಕರನ್ನು ಖಾಯಂಗೊಳಿಸಿ, ದಿಃ01-05-2000ರ ಪೂರ್ವಾಹ್ನದಿಂದ ಜಾರಿಗೆ ಬರುವಂತೆ ಅವರ ಸೇವೆಯನ್ನು ಸಕ್ರಮಗೊಳಿಸಿ 1999 ರ ವೇತನ ಶ್ರೇಣಿ ರೂಃ 2500-3850 ರಂತೆ ಮಂಜೂರು ಮಾಡಿ ಆದೇಶ ಹೊರಡಿಸಿ ಸರ್ಕಾರದ ಆದೇಶ ಸಂಃ ನಅಇ 31 ಎಂಎನ್‌ಇ 98 ದಿಃ 21-08-95ರ ಸೂಚನೆಗಳನ್ನು ಉಲ್ಲಂಘಿಸಿರುವ ಹಾಗೂ ಮುಷ್ಕರದ ಸಮಯದಲ್ಲಿ ಬೇಡಿಕೆಗಳ ಬಗ್ಗೆ ಪರಿಶೀಲಿಸಿ ಕ್ರಮಕೈಗೊಳ್ಳುವಂತೆ ಸರ್ಕಾರದ ಪತ್ರ ಸಂಃ ನಅಇ 45 ಎಂಎಂಸಿ 2000 ದಿಃ23-06-2000 ಮತ್ತು ಅದೇ ಸಂಖ್ಯೆಯ ದಿಃ 07-07-2000 ರ ಪತ್ರಗಳಲ್ಲಿ ನಿರ್ದೇಶಿಸಲಾಗಿದ್ದರೂ ಸಹ ನೌಕರರನ್ನು ಸಕ್ರಮೀಕರಣಗೊಳಿಸುವ ಬಗ್ಗೆ ಸರ್ಕಾರದ ಗಮನಕ್ಕೆ ತರದೇ ಬದಲಿ ಪೌರ ಕಾರ್ಮಿಕರ ಸಕ್ರಮೀಕರಣವನ್ನು ಸರ್ಕಾರದ ಆದೇಶದನ್ವಯ ಮಾಡದೇ ಹಾಗೂ ಸರ್ಕಾರದ ಆದೇಶ ಪಡೆಯಲು ಸೂಕ್ತ ಕ್ರಮ ಕೈಗೊಳ್ಳದೇ ಕರ್ತವ್ಯಚ್ಯುತಿ ಎಸಗಿ ಸರ್ಕಾರದ ಸ್ಥಾಯಿ ಆದೇಶಗಳನ್ನು ಉಲ್ಲಂಘಿಸಿರುವ ಆರೋಪಗಳ ಕುರಿತು ವಿಚಾರಣೆ ನಡೆಸಲು ಮೇಲೆ ಕ್ರಮ ಸಂ(1)ರಲ್ಲಿ ಓದಲಾದ ನೋಟೀಸಿನೊಂದಿಗೆ ದೋಷಾರೋಪಣೆಗಳನ್ನು ಜಾರಿ ಮಾಡುವುದರ ಮೂಲಕ ಅವರ ವಿರುದ್ದ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ಮೇಲೆ ಓದಲಾದ ಕ್ರಮ ಸಂ(2)ರಂತೆ ಅಪಾದಿತ ಅಧಿಕಾರಿಯು ನೋಟೀಸ್‌ಗೆ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು

ನಿರಾಕರಿಸಿರುತ್ತಾರೆ. ಆದುದರಿಂದ ಸದರಿಯವರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಮೇಲೆ ಕ್ರಮ ಸಂ(3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಹೆಚ್. ಉಮೇಶ್ ಶೆಟ್ಟಿ ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ (4) ರಲ್ಲಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿ ಸದರಿ ಅಧಿಕಾರಿಯು ನಗರಾಭಿವೃದ್ಧಿ ಇಲಾಖೆಯ ಆದೇಶದಂತೆ ಹಾಗೂ ಜಿಲ್ಲಾಧಿಕಾರಿಗಳ ಸಭೆಯಲ್ಲಿ ನಡೆದ ನಿರ್ಣಯದಂತೆ ಕ್ರಮ ಕೈಗೊಂಡಿದ್ದಾರೆ ಮತ್ತು ಸರ್ಕಾರಕ್ಕೆ ಮಾಹಿತಿಯನ್ನು ನೀಡಿರುವ ಹಿನ್ನಲೆಯಲ್ಲಿ ಸದರಿ ಅಧಿಕಾರಿಯ ವಿರುದ್ದ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ.

ವಿಚಾರಣೆ ವರದಿಯನ್ನು ದಾಖಲೆಗಳೊಂದಿಗೆ ಪರಿಶೀಲಿಸಿ ಶ್ರೀ ಜೆ.ಆರ್. ಲೋಬೋ, ಕೆ.ಎ.ಎಸ್ ಅಧಿಕಾರಿ ಇವರ ವಿರುದ್ದ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಆರೋಪಿತ ಅಧಿಕಾರಿಯನ್ನು ಆರೋಪಗಳಿಂದ ಮುಕ್ತರನ್ನಾಗಿಸಲು ಸರ್ಕಾರವು ತೀರ್ಮಾನಿಸಿದೆ. ಆದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ 141 ಎಸ್‌ಇಎನ್ 2005,ಬೆಂಗಳೂರು ದಿನಾಂಕಃ 25ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ಜೆ.ಅರ್. ಲೋಬೋ ಕೆ.ಎ.ಎಸ್. (ಹಿ.ಶ್ರೇ) ಅಧಿಕಾರಿ ಅವರನ್ನು ದಿಃ 02-02-2006 ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ. ಹಾಗೂ ಇನ್ನು ಮುಂದೆ ಕಛೇರಿ ಕೆಲಸದಲ್ಲಿ ಈ ರೀತಿ ನಿರ್ಲಕ್ಷತೆಯನ್ನು ತೋರಬಾರದೆಂದು ಈ ಮೂಲಕ ಎಚ್ಚರಿಕೆಯನ್ನು ನೀಡಲಾಗಿದೆ.

**ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.**

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ

ಪಿ.ಆರ್. 182

**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು-2)

**ವಿಷಯಃ** ಶ್ರೀ ಎ ಮರೀಗೌಡ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಹಿಂದಿನ ಕ್ಷೇತ್ರಾಭಿವೃದ್ದಿ ಅಧಿಕಾರಿ, ಕೆ.ಆರ್. ನಗರ, ಶ್ರೀ ಚನ್ನವೀರೇಗೌಡ, ಹಿಂದಿನ ಸಮಾಜ ಕಲ್ಯಾಣ ವಿಸ್ತರಣಾಧಿಕಾರಿ, ಕೆ.ಆರ್. ನಗರ ಹಾಗೂ ಶ್ರೀ ಹೆಚ್ ಶಿವಯ್ಯ, ಶಿರಸ್ತೇದಾರ್, ತಾಲ್ಲೂಕು ಪಂಚಾಯತ್, ಕೆ ಆರ್ ನಗರ ಇವರುಗಳ ವಿರುದ್ಧ ವಿರುದ್ಧ ಜಂಟಿ ಇಲಾಖಾ ವಿಚಾರಣೆ - ಶ್ರೀ ಹೆಚ್ ಶಿವಯ್ಯ ರವರನ್ನು ವಿಚಾರಣೆಯಿಂದ ಕೈಬಿಡುವ ಬಗ್ಗೆ ಆದೇಶ

ಓದಲಾಗಿದೆಃ
1. ದಿನಾಂಕಃ 16-07-07 ರ ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ 107 ಎಸ್‌ಇಎನ್ 96,
2. ದಿನಾಂಕಃ 06-11-06 ರ ನೋಟೀಸು ಸಂಖ್ಯೆಃ ಸಿಆಸುಇ 107 ಎಸ್‌ಇಎನ್ 96,
3. ದಿನಾಂಕಃ 25-07-07 ರ ಅನಧಿಕೃತ ಟಿಪ್ಪಣಿ ಸಂಖ್ಯೆಃ ಗ್ರಾಅಪ 107 ವಿಸೇಬಿ 07

**ಪ್ರಸ್ತಾವನೆಃ**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ಶ್ರೀ ಎ ಮರೀಗೌಡ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರು ಮೈಸೂರು ಜಿಲ್ಲೆ, ಕೆ ಆರ್ ನಗರ ತಾಲ್ಲೂಕಿನ ಕ್ಷೇತ್ರಾಭಿವೃದ್ದಿ ಅಧಿಕಾರಿಯ ಹುದ್ದೆಯಲ್ಲಿ, ಶ್ರೀ ಚನ್ನವೀರೇಗೌಡ ಇವರು ಕೆ ಆರ್ ನಗರ ತಾಲ್ಲೂಕಿನ ಸಮಾಜ ಕಲ್ಯಾಣ ವಿಸ್ತರಣಾಧಿಕಾರಿ ಹುದ್ದೆಯಲ್ಲಿ ಹಾಗೂ ಶ್ರೀ ಹೆಚ್ ಶಿವಯ್ಯ, ಶಿರಸ್ತೇದಾರ್ ಇವರು ಕೆ ಆರ್ ನಗರ ತಾಲ್ಲೂಕಿನ ಮಿರ್ಲೆ ಗ್ರಾಮದ ಮಂಡಲ ಪಂಚಾಯತಿ ಕಾರ್ಯದರ್ಶಿಯ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, 1988-89 ನೇ ಸಾಲಿನಲ್ಲಿ ಮಿರ್ಲೆ ಗ್ರಾಮದ ಜೀತ ವಿಮುಕ್ತರ ಪುನರ್ ವಸತಿ ಯೋಜನೆಯಡಿಯಲ್ಲಿ ರಾಸುಗಳು ಹಾಗೂ ದನದ ಆಹಾರಗಳನ್ನು ಖರೀದಿಸುವಲ್ಲಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಸರ್ಕಾರಕ್ಕೆ ಮೋಸ / ನಷ್ಟ ಉಂಟು ಮಾಡಿದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ರವರನ್ನು ವಿಚಾರಣಾಧಿಕಾರಿಯಾಗಿ ಹಾಗೂ ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಕೆ ಆರ್ ನಗರ ರವರನ್ನು ಶಿಸ್ತು ಪ್ರಾಧಿಕಾರಿಯ ಪರವಾಗಿ ಮಂಡನಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಜಂಟೀ ವಿಚಾರಣೆಯನ್ನು ಮುಂದುವರಿಸಲು ಆದೇಶಿಸಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ನೋಟೀಸಿನಲ್ಲಿ, ಶ್ರೀ ಹೆಚ್ ಶಿವಯ್ಯ ರವರು ಕರ್ತವ್ಯ ಲೋಪ ಎಸಗಿರುವ ಕಾರಣ, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11 ರಡಿ ಇವರ ವಿರುದ್ಧ ಆರೋಪ ಪಟ್ಟಿಯನ್ನು ಸಿದ್ದಗೊಳಿಸಿ, ಗ್ರಾಮೀಣ ಅಭಿವೃದ್ದಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಮೂಲಕ ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯ ಪ್ರಕಾರ, ಶ್ರೀ ಹೆಚ್ ಶಿವಯ್ಯ ರವರು ದಿನಾಂಕಃ 19-03-2000 ರಂದು ಮೃತಹೊಂದಿರುವುದು ನಂತರ ತಿಳಿದುಬಂದ ಕಾರಣ, ದೋಷಾರೋಪಣ ಪಟ್ಟಿಯನ್ನು ಜಾರಿಗೊಳಿಸಲು ಸಾಧ್ಯವಾಗಿರುವುದಿಲ್ಲವೆಂಬ ವರದಿಯ ಹಿನ್ನೆಲೆಯಲ್ಲಿ ಸರ್ಕಾರವು ದಿವಂಗತ ಹೆಚ್ ಶಿವಯ್ಯ ರವರನ್ನು ಜಂಟೀ ಇಲಾಖಾ ವಿಚಾರಣೆಯಿಂದ ಕೈಬಿಡಲು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 008 ಕೆಇವಿ 07, ಬೆಂಗಳೂರು, ದಿನಾಂಕ: 29 ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ದಿವಂಗತ ಹೆಚ್ ಶಿವಯ್ಯ, ಶಿರಸ್ತೇದಾರ್ ಹಾಗೂ ಅಂದಿನ ಕೆ ಆರ್ ನಗರ ತಾಲ್ಲೂಕಿನ ಮಿರ್ಲೆ ಗ್ರಾಮದ ಮಂಡಲ ಪಂಚಾಯತಿ ಕಾರ್ಯದರ್ಶಿ ಇವರನ್ನು ದಿನಾಂಕ: 16-07-07ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 107 ಎಸ್‌ಇಎನ್ 96 ರಲ್ಲಿ ಆದೇಶಿಸಿರುವ ಜಂಟಿ ಇಲಾಖಾ ವಿಚಾರಣೆಯಿಂದ ಕೈಬಿಡಲಾಗಿದೆ.

ಈ ವಿಚಾರಣೆಯು ಪ್ರಾರಂಭವಾಗದೇ ಇದ್ದಲ್ಲಿ, ಇವರು ನಿಯಮಾನುಸಾರದ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 181

**ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

**ವಿಷಯ:** ಶ್ರೀ ನಾಗರಾಜ, ಕೆ ಎ ಎಸ್ (ಕಿರಿಯ ಶ್ರೇಣಿ) ಅಧಿಕಾರಿ, ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಗೃಹ ಮಂಡಳಿ ಇವರ ವಿರುದ್ಧ ಇಲಾಖಾ ವಿಚಾರಣೆ - ಅಂತಿಮ ಆದೇಶ

**ಓದಲಾಗಿದೆ:** 1) ದಿನಾಂಕ: 08-03-07 ರ ಆದೇಶ ಸಂಖ್ಯೆ: ಸಿಆಸುಇ 297 ಎಸ್‌ಇಎನ್ 06

2) ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ವರದಿ ದಿನಾಂಕ: 23-07-07

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ, ಶ್ರೀ ನಾಗರಾಜ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರನ್ನು ದಿನಾಂಕ: 20-06-06ರ ಅಧಿಸೂಚನೆ ಸಂಖ್ಯೆ: ಸಿಆಸುಇ 097 ಆಸೇವ 06ರ ಪ್ರಕಾರ ಉಪ ವಿಭಾಗಾಧಿಕಾರಿಗಳು, ರಾಯಚೂರು ಉಪ ವಿಭಾಗ, ರಾಯಚೂರು ಹುದ್ದೆಗೆ ವರ್ಗಾಯಿಸಿದ್ದು, ಇವರು ಸದರಿ ವರ್ಗಾಯಿಸಿದ ಹುದ್ದೆಯ ಕರ್ತವ್ಯಕ್ಕೆ ಹಾಜರಾಗದಿರುವ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ತಿಳಿಯುವ ಸಲುವಾಗಿ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11 (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆರೋಪದ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಶ್ರೀ ಎಂ ಎಸ್ ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಂತೆ ವಿಚಾರಣಾಧಿಕಾರಿಯವರು ಸಲ್ಲಿಸಿದ ವಿಚಾರಣಾ ವರದಿಯಲ್ಲಿ, ಶ್ರೀ ನಾಗರಾಜ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಇವರು ದಿನಾಂಕ: 20-06-06 ರ ಅಧಿಸೂಚನೆ ಸಂಖ್ಯೆ: ಸಿಆಸುಇ 097 ಆಸೇವ 06 ರ ಪ್ರಕಾರ ವರ್ಗಾಯಿಸಲಾದ ಉಪ ವಿಭಾಗಾಧಿಕಾರಿಗಳು, ರಾಯಚೂರು ಉಪ ವಿಭಾಗ, ರಾಯಚೂರು ಹುದ್ದೆಯ ಕರ್ತವ್ಯಕ್ಕೆ ಹಾಜರಾಗದೇ, ಸದರಿ ಅಧಿಸೂಚನೆಯನ್ನು ಉಲ್ಲಂಘಿಸಿ, ಅನಧಿಕೃತವಾಗಿ ಗೈರು ಹಾಜರಾಗಿರುವ ಆರೋಪವು ಸಾಬೀತಾಗಿದೆ ಎಂದು ವರದಿ ನೀಡಿರುತ್ತಾರೆ. ವಿಚಾರಣಾ ವರದಿಯನ್ನು ಸರ್ಕಾರವು, ಕೂಲಂಕಶವಾಗಿ ಪರಿಶೀಲಿಸಿದ ನಂತರ ಅಂಗೀಕರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 070 ಕೆಇವಿ 07 ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 8 (iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನಾಗರಾಜ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, (ಪ್ರಸ್ತುತ ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ) ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ (without cumulative effect) ತಡೆ ಹಿಡಿಯಲು ಆದೇಶಿಸುತ್ತದೆ.

ಸದರಿ ಅಧಿಕಾರಿಯು ಗೈರುಹಾಜರಾದ ದಿನಾಂಕ: 20-06-06 ರಿಂದ 15-12-06 ರವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ, 1958 ರ ನಿಯಮ 106-A ರ ಪ್ರಕಾರ dies-non ಅವಧಿಯೆಂದು ಆದೇಶಿಸುತ್ತದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 376

**ಹೆಚ್ ಆರ್ ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

**ವಿಷಯ:** ಶ್ರೀ ಓಂಕಾರಮೂರ್ತಿ, ಕೆಎಎಸ್ ಕಿರಿಯ ಶ್ರೇಣಿ ಅಧಿಕಾರಿ, ಹಿಂದಿನ ತಹಶೀಲ್ದಾರ್, ತರೀಕೆರೆ ಹಾಗೂ ಶ್ರೀ ಈ.ಆರ್. ಹಾಲಪ್ಪ, ಗ್ರಾಮ ಪಂಚಾಯತಿ ಕಾರ್ಯದರ್ಶಿ, ಸುಣದಹಳ್ಳಿ, ಚಿಕ್ಕಮಗಳೂರು (ಹಿಂದಿನ ವಿಷಯ ನಿರ್ವಾಹಕರು, ತಾಲ್ಲೂಕು ಕಛೇರಿ, ತರೀಕೆರೆ) ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ -ಮಂಡನಾಧಿಕಾರಿಯವರನ್ನು ಬದಲಾಯಿಸಿ ನೇಮಿಸುವ ಬಗ್ಗೆ.

**ಓದಲಾಗಿದೆ:** ದಿನಾಂಕ: 27-08-07 ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 086 ಎಸ್‌ಇಎನ್ 04.

**ಪ್ರಸ್ತಾವನೆಃ**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ, ಶ್ರೀ ಓಂಕಾರಮೂರ್ತಿ, ಕೆ.ಎ.ಎಸ್. ಕಿರಿಯ ಶ್ರೇಣಿ ಅಧಿಕಾರಿ, ಇವರು ತರೀಕೆರೆ ತಾಲ್ಲೂಕು ತಹಶೀಲ್ದಾರರಾಗಿ ಮತ್ತು ಶ್ರೀ ಈ.ಆರ್. ಹಾಲಪ್ಪ, ಇವರು ತರೀಕೆರೆ ತಾಲ್ಲೂಕು ಕಛೇರಿಯಲ್ಲಿ ವಿಷಯ ನಿರ್ವಾಹಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಶ್ರೀ ಎಸ್ ಎನ್ ಮಹೇಂದ್ರ ಎಂಬುವವರು ಹಿಂದುಳಿದ ವರ್ಗದ ಕುರುಬ ಜಾತಿಗೆ ಸೇರಿದ್ದರೂ ಸಹ ಸದರಿಯವರು ಪರಿಶಿಷ್ಟ ಪಂಗಡಕ್ಕೆ ಸೇರಿದವರೆಂದು ಸುಳ್ಳು ಜಾತಿ ಪ್ರಮಾಣ ಪತ್ರ ನೀಡಿದ ಆರೋಪದ ಸಂಬಂಧ ಸದರಿ ಅಧಿಕಾರಿ / ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಿ, ಇಲಾಖಾ ವಿಚಾರಣೆ ನಡೆಸಿ ವರದಿ ಸಲ್ಲಿಸಲು, ಪ್ರಾದೇಶಿಕ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ತಹಶೀಲ್ದಾರ್, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ರವರನ್ನು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ಮಂಡನಾಧಿಕಾರಿಯಾಗಿ ನೇಮಿಸಲ್ಪಟ್ಟ ತಹಶೀಲ್ದಾರ್ ತರೀಕೆರೆ ತಾಲ್ಲೂಕು ರವರು ಆರೋಪ ಪಟ್ಟಿಯ ಅನುಬಂಧ-3 ರಲ್ಲಿನ ಸಾಕ್ಷಿ ಪಟ್ಟಿಯಲ್ಲಿ ಸಾಕ್ಷಿದಾರರಾಗಿಯೂ ಸಹ ಇರುವುದು ಸರ್ಕಾರದ ಗಮನಕ್ಕೆ ಬಂದಿರುವ ಹಿನ್ನೆಲೆಯಲ್ಲಿ ಮಂಡನಾಧಿಕಾರಿಯನ್ನು ಬದಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 197 ಕೆಇವಿ 07, ಬೆಂಗಳೂರು, ದಿನಾಂಕಃ 21ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 11(5)(c) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ತಹಶೀಲ್ದಾರ್, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರ ಬದಲಿಗೆ ತಹಶೀಲ್ದಾರ್ (ಆಡಳಿತ), ಪ್ರಾದೇಶಿಕ ಆಯುಕ್ತರ ಕಛೇರಿ, ಬೆಂಗಳೂರು ವಿಭಾಗ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 156

**ಹೆಚ್ ಆರ್ ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

**ವಿಷಯಃ** ಶ್ರೀ ಜೋಗಯ್ಯ, ಕೆಎಎಸ್ (ಕಿರಿಯ ಶ್ರೇಣಿ) (ನಿವೃತ್ತ) ಅಧಿಕಾರಿ, ಅಂದಿನ ತಹಶೀಲ್ದಾರ್, ಶ್ರೀ ವಿ ಸಿ ಇನಾಂದಾರ್, ಅಂದಿನ ಹಕ್ಕುದಾಖಲೆ ಶಿರಸ್ತೇದಾರ್, ಶ್ರೀ ಐ ಕೆ ತಟಗಾರ್, ಅಂದಿನ ಗ್ರಾಮ ಲೆಕ್ಕಿಗರು, ಶ್ರೀಮತಿ ಎಂ ಲೀಲಾವತಿ, ಅಂದಿನ ದ್ವಿತೀಯ ದರ್ಜೆ ಸಹಾಯಕರು, ಶ್ರೀ ಸುನೀಲ್ ಕುಮಾರ್, ಅಂದಿನ ದ್ವಿತೀಯ ದರ್ಜೆ ಭೂ ಮಾಪಕರು ಮತ್ತು ಶ್ರೀ ಡಿ ಎಂ ಆಂಜಿನಪ್ಪ, ಅಂದಿನ ದ್ವಿತೀಯ ದರ್ಜೆ ಭೂ ಮಾಪಕರು, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ - ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆಃ**
1. ನೋಟೀಸು ಸಂಖ್ಯೆಃ ಸಿಆಸುಇ 120 ಎಸ್ಇಎನ್ 07, ದಿನಾಂಕಃ 16-05-07, 20-09-07
2. ಶ್ರೀ ಜೋಗಯ್ಯ, ಕೆಎಎಸ್ (ಕಿರಿಯ ಶ್ರೇಣಿ) (ನಿವೃತ್ತ) ಅಧಿಕಾರಿ ಇವರ ದಿನಾಂಕಃ 29-06-07 ರ ಉತ್ತರ.
3. ಶ್ರೀ ವಿ ಸಿ ಇನಾಂದಾರ್, ಶಿರಸ್ತೇದಾರ್, ತಾಲ್ಲೂಕು ಕಛೇರಿ, ಭದ್ರಾವತಿ ತಾಲ್ಲೂಕು (ಅಂದಿನ ಹಕ್ಕುದಾಖಲೆ ಶಿರಸ್ತೇದಾರ್, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು) ಇವರ ದಿನಾಂಕಃ 12-12-07 ರ ಉತ್ತರ
4. ಶ್ರೀ ಐ ಕೆ ತಟಗಾರ್, ಪ್ರಥಮ ದರ್ಜೆ ಸಹಾಯಕರು, ಕೆ ಐ ಎ ಡಿ ಬಿ, ಗಾಂಧಿನಗರ, ಬೆಂಗಳೂರು (ಅಂದಿನ ಗ್ರಾಮ ಲೆಕ್ಕಿಗರು, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು) ಇವರ ದಿನಾಂಕಃ 12-12-07 ರ ಉತ್ತರ.
5. ಶ್ರೀ ಡಿ ಎಂ ಆಂಜಿನಪ್ಪ, ದ್ವಿತೀಯ ದರ್ಜೆ ಭೂಮಾಪಕರು, ತಾಲ್ಲೂಕು ಕಛೇರಿ, ಚನ್ನಪಟ್ಟಣ ತಾಲ್ಲೂಕು (ಅಂದಿನ ದ್ವಿತೀಯ ದರ್ಜೆ ಭೂ ಮಾಪಕರು, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು) ಇವರ ದಿನಾಂಕಃ 12-12-07 ರ ಉತ್ತರ.
6. ಶ್ರೀ ಸುನೀಲಕುಮಾರ್, ದ್ವಿತೀಯ ದರ್ಜೆ ಭೂಮಾಪಕರು, ತಾಲ್ಲೂಕು ಕಛೇರಿ, ಹುಮ್ನಾಬಾದ್ ತಾಲ್ಲೂಕು (ಅಂದಿನ ದ್ವಿತೀಯ ದರ್ಜೆ ಭೂ ಮಾಪಕರು, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು) ಇವರ ದಿನಾಂಕಃ 22-11-07 ರ ಉತ್ತರ
7. ಶ್ರೀಮತಿ ಎಂ. ಲೀಲಾವತಿ, ದ್ವಿತೀಯ ದರ್ಜೆ ಸಹಾಯಕಿ, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು ಇವರ ದಿನಾಂಕಃ 01-12-07 ರ ಉತ್ತರ

**ಪ್ರಸ್ತಾವನೆಃ**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ನೋಟೀಸಿನಲ್ಲಿ, ಶ್ರೀ ಜೋಗಯ್ಯ, ಕೆಎಎಸ್ (ಕಿರಿಯ ಶ್ರೇಣಿ) (ಹಾಲಿ ನಿವೃತ್ತರಾಗಿರುವ) ಅಧಿಕಾರಿ ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕಿನ ತಹಶೀಲ್ದಾರರ ಹುದ್ದೆಯಲ್ಲಿ,

ಶ್ರೀ ವಿ ಸಿ ಇನಾಂದಾರ್ ರವರು ಹಕ್ಕುದಾಖಲೆ ಶಿರಸ್ತೇದಾರರ ಹುದ್ದೆಯಲ್ಲಿ, ಶ್ರೀ ಐ ಕೆ ತಟಗಾರ್, ದೊಡ್ಡಹುಲ್ಲೂರು ವೃತ್ತದ ಗ್ರಾಮ ಲೆಕ್ಕಿಗರ ಹುದ್ದೆಯಲ್ಲಿ, ಶ್ರೀಮತಿ ಎಂ ಲೀಲಾವತಿ, ದ್ವಿತೀಯ ದರ್ಜೆ ಸಹಾಯಕರ ಹುದ್ದೆಯಲ್ಲಿ, ಶ್ರೀ ಸುನೀಲ್ ಕುಮಾರ್, ದ್ವಿತೀಯ ದರ್ಜೆ ಭೂ ಮಾಪಕರ ಹುದ್ದೆಯಲ್ಲಿ ಮತ್ತು ಶ್ರೀ ಡಿ ಎಂ ಆಂಜಿನಪ್ಪ, ದ್ವಿತೀಯ ದರ್ಜೆ ಭೂ ಮಾಪಕರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರುಗಳ ವಿರುದ್ಧ, ಹೊಸಕೋಟೆ ತಾಲ್ಲೂಕು, ಕಸಬಾ ಹೋಬಳಿ, ಚಿಕ್ಕಹುಲ್ಲೂರು ಗ್ರಾಮದ ಸರ್ಕಾರಿ ಜಮೀನು ಸರ್ವೆ ನಂ 25 ರಲ್ಲಿ ಒಟ್ಟು 17 ಜನರಿಗೆ ಬೋಗಸ್ (Bogus) ಸಾಗುವಳಿ ಚೀಟಿ ಆಧಾರದ ಮೇಲೆ ಮಂಜೂರು ಮಾಡಲಾಗಿದೆ ಎನ್ನುವ ಸೃಷ್ಠಿತ ಕಡತದ ಆಧಾರದ ಮೇಲೆ ಪೋಡಿ ದುರಸ್ತಿಪಡಿಸಿ, ಹೊಸ ಸರ್ವೆ ನಂ 54 ರಿಂದ 70 ಎಂದು ಒಟ್ಟು 17 ಜನರ ಹೆಸರಿಗೆ 58-00 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನಿಗೆ ಅಕ್ರಮ ದಾಖಲೆ ಸೃಷ್ಟಿಸಿರುವ ಆರೋಪದ ಸಂಬಂಧ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ ಶಿಸ್ತು ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಮೇಲೆ ಕ್ರಮ ಸಂಖ್ಯೆ (2) ರಿಂದ (7) ರವರೆಗಿನ ಉತ್ತರಗಳಲ್ಲಿ, ಆರೋಪಿತ ಅಧಿಕಾರಿ / ನೌಕರರು, ಕಾರಣ ಕೇಳುವ ನೋಟೀಸಿಗೆ ಉತ್ತರವಾಗಿ ಸಲ್ಲಿಸಲಾದ ತಮ್ಮ ಸಮಜಾಯಿಷಿಯಲ್ಲಿ, ಇವರುಗಳ ಮೇಲೆ ಹೊರಿಸಲಾದ ಆರೋಪವನ್ನು ನಿರಾಕರಿಸಿರುವ ಕಾರಣ, ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಠಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 260 ಕೆಇವಿ 07, ಬೆಂಗಳೂರು ದಿನಾಂಕ: 17ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 13 ನ್ನು ಓದಿಕೊಂಡಂತೆ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಜೋಗಯ್ಯ, ಕೆಎಎಸ್ (ಕಿರಿಯ ಶ್ರೇಣಿ) (ಹಾಲಿ ನಿವೃತ್ತರಾಗಿರುವ) ಅಧಿಕಾರಿ, ಅಂದಿನ ತಹಶೀಲ್ದಾರ್, ಶ್ರೀ ವಿ ಸಿ ಇನಾಂದಾರ್, ಅಂದಿನ ಹಕ್ಕುದಾಖಲೆ ಶಿರಸ್ತೇದಾರ್, ಶ್ರೀ ಐ.ಕೆ. ತಟಗಾರ್, ಅಂದಿನ ಗ್ರಾಮ ಲೆಕ್ಕಿಗರು, ಶ್ರೀಮತಿ ಎಂ ಲೀಲಾವತಿ, ದ್ವಿತೀಯ ದರ್ಜೆ ಸಹಾಯಕರು, ಶ್ರೀ ಸುನೀಲ್ ಕುಮಾರ್, ಅಂದಿನ ದ್ವಿತೀಯ ದರ್ಜೆ ಭೂ ಮಾಪಕರು ಮತ್ತು ಶ್ರೀ ಡಿ ಎಂ ಆಂಜಿನಪ್ಪ, ಅಂದಿನ ದ್ವಿತೀಯ ದರ್ಜೆ ಭೂ ಮಾಪಕರು, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರುಗಳ ವಿರುದ್ಧ ಮಾಡಲಾದ ಆರೋಪಗಳ ಕುರಿತಂತೆ ಜಂಟಿ ವಿಚಾರಣೆ ನಡೆಸಲು ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು, ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ವಿಚಾರಣೆಯನ್ನು ಮೂರು ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 155

**ಹೆಚ್ ಆರ್ ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

**ವಿಷಯ:** ಶ್ರೀ ಜಿ.ಎಸ್. ಜಿದ್ದಿಮನಿ, ಕೆ.ಎ.ಎಸ್ ಅಧಿಕಾರಿ ಹಾಗೂ ಶ್ರೀ ಎ.ಐ. ಕಂಬೋಗಿ, ಪ್ರಥಮ ದರ್ಜೆ ಲೆಕ್ಕ ಸಹಾಯಕರು - ಇವರುಗಳ ವಿರುದ್ದ ಇಲಾಖಾ ವಿಚಾರಣೆ - ಶ್ರೀ ಜಿದ್ದಿಮನಿ ರವರನ್ನು ದೋಷಮುಕ್ತರನ್ನಾಗಿ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ:**
1. ದಿನಾಂಕ: 03-04-07 ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 059 ಎಸ್ಇಎನ್ 05.
2. ಶ್ರೀ ಡಿ.ವಿ. ಶೇಟ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ದಿನಾಂಕ: 24-09-07

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ, ಶ್ರೀ ಜಿ ಎಸ್ ಜಿದ್ದಿಮನಿ, ಕೆಎಎಸ್ ಅಧಿಕಾರಿ ಇವರು ಕೃಷ್ಣ ಮೇಲ್ದಂಡೆ ಯೋಜನೆ, ಬೀಳಗಿಯಲ್ಲಿ ವಿಶೇಷ ಭೂ ಸ್ವಾಧೀನಾಧಿಕಾರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಮತ್ತು ಶ್ರೀ ಎ.ಐ. ಕಂಬೋಗಿ, ಪ್ರಥಮ ದರ್ಜೆ ಲೆಕ್ಕ ಸಹಾಯಕರು ಇವರು ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿ, ಕೃಷ್ಣ ಮೇಲ್ದಂಡೆ ಯೋಜನೆ, ಬೀಳಗಿ ಇಲ್ಲಿ ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಬೀಳಗಿ ತಾಲ್ಲೂಕಿನ ಕಂದಗಲ್ಲ ಗ್ರಾಮದ ವಿ.ಪಿ.ಸಿ. ನಂ. 57 ರ ಭೂ ಸ್ವಾಧೀನಕ್ಕೆ ಸಂಬಂಧಿಸಿದಂತೆ ಅಫಿಡವಿಟ್‌ನ್ನು 625 ದಿನಗಳ ವಿಳಂಭ ಮಾಡಿ ಮೇಲ್ಮನವಿ ಸಲ್ಲಿಸಿ ಅಪೀಲು ತಿರಸ್ಕೃತಗೊಳ್ಳಲು ಕಾರಣರಾದ ಆರೋಪಗಳ ಸಂಬಂಧ ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 13 ನ್ನು ಓದಿಕೊಂಡಂತೆ ನಿಯಮ 11 (2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ವಿಚಾರಣೆ ನಡೆಸಲು ಶ್ರೀ ಡಿ ವಿ ಶೇಟ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಕ್ರಮ ಸಂಖ್ಯೆ (2) ರಂತೆ ವಿಚಾರಣಾಧಿಕಾರಿಯವರು ಸಲ್ಲಿಸಿದ ವಿಚಾರಣಾ ವರದಿಯಲ್ಲಿ, ಶ್ರೀ ಜಿ ಎಸ್ ಜಿದ್ದಿಮನಿ, ಕೆಎಎಸ್ ಅಧಿಕಾರಿ ಇವರು ಪ್ರಕರಣ ನಡೆದ ಅವಧಿಯಾದ ದಿನಾಂಕಃ 20-12-94 ರಿಂದ 07-01-97 ರವರೆಗೆ ಕೃಷ್ಣ ಮೇಲ್ದಂಡೆ ಯೋಜನೆ, ಬೀಳಗಿಯಲ್ಲಿ ವಿಶೇಷ ಭೂ ಸ್ವಾಧೀನಾಧಿಕಾರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರಲಿಲ್ಲವೆಂದು, ಈ ಅವಧಿಯಲ್ಲಿ ಕಾರ್ಯ ನಿರ್ವಹಿಸಿದ ಅಧಿಕಾರಿ / ಸಿಬ್ಬಂದಿ ವರ್ಗದವರ ಮೇಲೆ ಇಲಾಖಾ ವಿಚಾರಣೆ ಆದೇಶಿಸಬೇಕಿತ್ತೆಂದು, ಆದರೆ, ದಿನಾಂಕಃ 10-01-02 ರಿಂದ ಉಚ್ಚ ನ್ಯಾಯಾಲಯದಲ್ಲಿ CRP 2280/02 ದಾಖಲು ಮಾಡಿದ ದಿನಾಂಕದವರೆಗೆ ಸದರಿ ಕಛೇರಿಯಲ್ಲಿ ಕಾರ್ಯನಿರ್ವಹಿಸಿದವರ ಮೇಲೆ ಕ್ರಮ ಜರುಗಿಸಿರುವುದು ನ್ಯಾಯಸಮ್ಮತ ಕ್ರಮವಲ್ಲವೆಂದು ತಿಳಿಸುತ್ತಾ, ಇವರ ಮೇಲಿನ ಆಪಾದನೆಗಳು ರುಜುವಾತು ಆಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ. ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕಶವಾಗಿ ಪರಿಶೀಲಿಸಿ, ಶ್ರೀ ಜಿದ್ದಿಮನಿ ರವರಿಗೆ ಸಂಬಂಧಪಟ್ಟಂತೆ ಮಾತ್ರ ವಿಚಾರಣಾ ವರದಿಯನ್ನು ಅಂಗೀಕರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 059 ಎಸ್‌ಇಎನ್ 05, ಬೆಂಗಳೂರು, ದಿನಾಂಕಃ 31ನೇ ಡಿಸೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು, ಶ್ರೀ ಜಿ ಎಸ್ ಜಿದ್ದಿಮನಿ, ಕೆಎಎಸ್ ಕಿರಿಯ ಶ್ರೇಣಿ ಅಧಿಕಾರಿ ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿ, ಕೃಷ್ಣ ಮೇಲ್ದಂಡೆ ಯೋಜನೆ, ಬೀಳಗಿ ಇವರನ್ನು ಪ್ರಸ್ತಾವನೆಯಲ್ಲಿ ವಿವರಿಸಿದ ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀಯುತರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 100

**ಹೆಚ್ ಆರ್ ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

**ವಿಷಯಃ** ಶ್ರೀ ಬಿ.ಟಿ. ರಾಜಣ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿ, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಇವರ ವಿರುದ್ಧ ಇಲಾಖಾ ವಿಚಾರಣೆ - ಮಂಡನಾಧಿಕಾರಿಯವರನ್ನು ಬದಲಾಯಿಸಿ ನೇಮಿಸುವ ಬಗ್ಗೆ.

**ಓದಲಾಗಿದೆಃ**
1. ದಿನಾಂಕಃ 29-08-07ರ ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ 018 ಎಸ್‌ಇಎನ್ 03.
2. ದಿನಾಂಕಃ 16-11-07ರ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು -ವಿಚಾರಣಾಧಿಕಾರಿಗಳು ಇವರ ಪತ್ರ ಸಂಖ್ಯೆಃ ಸಿಸಿಎ/ ಮಿಸ್/ ಸಿಆರ್/ 7007-08.

**ಪ್ರಸ್ತಾವನೆಃ**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಆದೇಶದಲ್ಲಿ, ಶ್ರೀ ಬಿ.ಟಿ. ರಾಜಣ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಇವರು ಈ ಹಿಂದೆ ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿ, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ತುಂಗಾ ಮೇಲ್ದಂಡೆ ಯೋಜನೆಗಾಗಿ ಭೂ ಸ್ವಾಧೀನಪಡಿಸಿಕೊಳ್ಳಲಾದ ಜಮೀನಿನ ಪೈಕಿ ಶಿವಮೊಗ್ಗ ತಾಲ್ಲೂಕು ಬೆಳಲಕಟ್ಟೆ ಗ್ರಾಮದ ಸರ್ವೆ ನಂ.78 ರಲ್ಲಿನ 01-03 ಎಕರೆ ಜಮೀನಿನ ಭೂ ಸ್ವಾಧೀನ ಪ್ರಕರಣದಲ್ಲಿ ಅನಾವಶ್ಯಕವಾಗಿ 0-23 ಎಕರೆ ಹೆಚ್ಚುವರಿ ಜಮೀನನ್ನು ಸ್ವಾಧೀನಪಡಿಸಿಕೊಂಡು ಶ್ರೀ ಹೆಚ್. ಷಣ್ಮುಖಪ್ಪ ಎಂಬುವವರಿಗೆ ಭೂ ಸ್ವಾಧೀನ ಪರಿಹಾರ ಹಣ ಪಾವತಿಸಿ ಸರ್ಕಾರಕ್ಕೆ ಆರ್ಥಿಕ ನಷ್ಟವುಂಟು ಮಾಡಿರುವ ಆರೋಪದ ಸಂಬಂಧ ಸದರಿ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆ ಮುಂದುವರಿಸಿ, ಅಧಿಕಾರಿಯ ವಿರುದ್ಧ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಗಳನ್ನು ವಿಚಾರಣೆ ಮೂಲಕ ತಿಳಿಯುವ ಸಲುವಾಗಿ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ರವರುನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕಾರ್ಯಪಾಲಕ ಅಭಿಯಂತರರು, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ರವರನ್ನು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ಪತ್ರದಲ್ಲಿ, ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು (ವಿಚಾರಣಾಧಿಕಾರಿಯವರು) ಇವರು, ಕಾರ್ಯಪಾಲಕ ಅಭಿಯಂತರರು, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಇವರು ಶಿಸ್ತು ಪ್ರಾಧಿಕಾರಿಯ ಪರವಾಗಿ ಸಾಕ್ಷಿ ಪಟ್ಟಿಯಲ್ಲಿದ್ದು, ಇವರನ್ನೇ ಮಂಡನಾಧಿಕಾರಿಯಾಗಿ ನೇಮಿಸಿರುವುದರಿಂದ, ಇವರನ್ನು ಬದಲಿಸಿ, ಬದಲೀ ಮಂಡನಾಧಿಕಾರಿಯನ್ನು ನೇಮಿಸುವಂತೆ ಕೋರಿರುವುದನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 034 ಕೆಇವಿ 07, ಬೆಂಗಳೂರು ದಿನಾಂಕಃ 3ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11(5)(c) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು, ಕಾರ್ಯಪಾಲಕ ಅಭಿಯಂತರರು, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಇವರ ಬದಲಿಗೆ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರನ್ನು ಈ ಪ್ರಕರಣದಲ್ಲಿ ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 78

**ಹೆಚ್ ಆರ್ ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

ವಿಷಯ: ಶ್ರೀ ಸೈಯದ್ ಸತ್ತಾರ್, ನಿವೃತ್ತ ಪತ್ರಾಂಕಿತ ಸಹಾಯಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಬೀದರ್ ರವರಿಗೆ ದಂಡನೆ ವಿಧಿಸಿದ ಆದೇಶದ ವಿರುದ್ಧ ಗೌರವಾನ್ವಿತ ರಾಜ್ಯಪಾಲರಿಗೆ ಮೇಲ್ಮನವಿ ಸಲ್ಲಿಸಿದ ಕುರಿತು ಹಾಗೂ ಮೇಲ್ಮನವಿಯನ್ನು ವಜಾ ಮಾಡಿ ಆದೇಶ ಹೊರಡಿಸುವ ಬಗ್ಗೆ.

ಓದಲಾಗಿದೆ:
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 74 ಎಸ್ಇಎನ್ 2002, ದಿನಾಂಕ: 23.05.05.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 74 ಎಸ್ಇಎನ್ 02, ದಿನಾಂಕ: 23.01.07.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 74 ಎಸ್ಇಎನ್ 02, ದಿನಾಂಕ: 17.05.07.
4. ಶ್ರೀ ಸೈಯದ್ ಸತ್ತಾರ್ ಇವರ ದಿನಾಂಕ: 20.02.2007ರ ಮೇಲ್ಮನವಿ.

**ಪ್ರಸ್ತಾವನೆ:**

ಬೀದರ್ ಜಿಲ್ಲಾ ಪಂಚಾಯತ್‌ನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಅನುಮೋದಿಸಲ್ಪಟ್ಟ ಪಟ್ಟಿಯಲ್ಲಿಲ್ಲದ ಇಲಾಖೆಗೆ ಉಪಯೋಗಕ್ಕೆ ಬಾರದ ಹಾಗೂ ಔಷಧವಲ್ಲದ Amcryale and Bio Adhesive ಎಂಬ ರಾಸಾಯಿನಕವನ್ನು ಖರೀದಿಸುವ ಮೂಲಕ ಸರ್ಕಾರಕ್ಕೆ ಲಕ್ಷಾಂತರ ರೂಪಾಯಿಗಳ ನಷ್ಟವುಂಟು ಮಾಡಿ ತೀವ್ರ ದುರ್ನಡತೆ ಎಸಗಿದ ಆರೋಪಗಳಿಗಾಗಿ ಈ ಕೆಳಕಂಡ ಅಧಿಕಾರಿ/ ನೌಕರರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಪಡೆಯಲಾಯಿತು.

1. ಶ್ರೀ ವೈ.ಸದಾಶಿವ್, ನಿವೃತ್ತ ಕೆಎಎಸ್ ಅಧಿಕಾರಿ
2. ಶ್ರೀಮತಿ ಡಾ: ಕೆ.ಸುಂದರಮ್ಮ ನಿವೃತ್ತ ಡಿಹೆಚ್ಓ
3. ಶ್ರೀ ರವಿಕುಮಾರ್ ಕಮಲಾಪುರ್‌ಕರ್ ಮುಖ್ಯ ಲೆಕ್ಕಾಧಿಕಾರಿ
4. ಶ್ರೀ ಸೈಯದ್ ಸತ್ತಾರ್, ನಿವೃತ್ತ ಪತ್ರಾಂಕಿತ ಸಹಾಯಕರು
5. ಶ್ರೀ ವಿಶ್ವನಾಥ್, ಪ್ರಥಮ ದರ್ಜೆ ಸಹಾಯಕರು
6. ಶ್ರೀ ಮಾಚಕಲ್ಲಪ್ಪ ಪ್ರಥಮ ದರ್ಜೆ ಸಹಾಯಕರು

ವಿಚಾರಣಾ ವರದಿಯನ್ನು ಪರಿಶೀಲಿಸಿ ಅದನ್ನು ಒಪ್ಪಿಕೊಂಡ ಸರ್ಕಾರವು ಮೇಲೆ ಓದಲಾದ (1)ರ ದಿ: 23.5.05ರ ಸರ್ಕಾರದ ಆದೇಶದಲ್ಲಿ ಸೇವೆಯಲ್ಲಿರುವ ಶ್ರೀ ರವಿಕುಮಾರ್ ಕಮಲಾಪುರ್‌ಕರ್, ಶ್ರೀ ವಿಶ್ವನಾಥ್ ಮತ್ತು ಶ್ರೀ ಮಾಚಕಲ್ಲಪ್ಪ ಅವರುಗಳಿಗೆ ಸಂಬಂಧಿಸಿದಂತೆ ಅವರುಗಳ ಮೇಲಿನ ಆರೋಪಗಳಿಂದ ಆರೋಪ ಮುಕ್ತರನ್ನಾಗಿಸಿ ಆದೇಶ ಹೊರಡಿಸಲಾಯಿತು. ಮೇಲೆ ಓದಲಾದ (2)ರ ದಿ: 23.1.07ರ ಸರ್ಕಾರಿ ಆದೇಶದಲ್ಲಿ ಶ್ರೀ ವೈ. ಸದಾಶಿವ, ಶ್ರೀಮತಿ ಡಾ: ಕೆ. ಸುಂದರಮ್ಮ ಮತ್ತು ಶ್ರೀ ಸೈಯದ್ ಸತ್ತಾರ್ ಅವರುಗಳ ನಿವೃತ್ತಿ ಸೌಲಭ್ಯಗಳಿಂದ ಆಗಿರುವ ನಷ್ಟದ ರೂ. 18.82 ಲಕ್ಷಗಳ ಪೈಕಿ ಅವರುಗಳ ಮಾಸಿಕ ವಿಶ್ರಾಂತಿ ಪಾಲಿನ ತಲಾ ರೂ. 3,13,666.67ಗಳನ್ನು ವಸೂಲಿ ಮಾಡಲು ಹಾಗೂ ಅವರುಗಳ ಮಾಸಿಕ ವಿಶ್ರಾಂತಿ ವೇತನದಿಂದ ರೂ. 1,000.00 ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ 5 ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲಾಯಿತು. ತದನಂತರ ಶ್ರೀ ರವಿಕುಮಾರ್ ಕಮಲಾಪುರ್‌ಕರ್, ಶ್ರೀ ವಿಶ್ವನಾಥ್ ಮತ್ತು ಶ್ರೀ ಮಾಚಕಲ್ಲಪ್ಪ ಅವರುಗಳಿಗೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ವಸೂಲಿ ಮಾಡಲು ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಮಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 26 ರನ್ವಯ ಪರಾಮರ್ಶಿಸಲು ಕೈಗೆತ್ತಿಗೊಂಡು ಮೇಲೆ ಓದಲಾದ (3)ರ ದಿ: 17.5.07ರ ಆದೇಶದಲ್ಲಿ ಶ್ರೀ ರವಿಕುಮಾರ್ ಕಮಲಾಪುರ್‌ಕರ್, ಶ್ರೀ ವಿಶ್ವನಾಥ್ ಮತ್ತು ಶ್ರೀ ಮಾಚಕಲ್ಲಪ್ಪ ಅವರುಗಳಿಂದ ಸರ್ಕಾರಕ್ಕೆ ಆಗಿರುವ ವೆಚ್ಚದ ಮೊತ್ತ ರೂ. 18.82 ಲಕ್ಷಗಳ ಪೈಕಿ ಅವರುಗಳ ಪಾಲಿನ ರೂ. 3,13,666.67 ಗಳನ್ನು ವಸೂಲು ಮಾಡಲು ಆದೇಶ ಹೊರಡಿಸಲಾಯಿತು.

ಈ ಬಗ್ಗೆ ಮೇಲ್ಕಂಡ ಅಧಿಕಾರಿ/ ನೌಕರರುಗಳ ಪೈಕಿ ಶ್ರೀ ಸೈಯದ್ ಸತ್ತಾರ್ ನಿವೃತ್ತ ಪತ್ರಾಂಕಿತ ಸಹಾಯಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಬೀದರ್ ರವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಮಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 18ರನ್ವಯ ಗೌರವಾನ್ವಿತ ರಾಜ್ಯಪಾಲರಿಗೆ ಮೇಲೆ (2)ರಲ್ಲಿ ಓದಲಾದ ಮೇಲ್ಮನವಿ ಸಲ್ಲಿಸಿರುತ್ತಾರೆ. ಅವರು ಸಲ್ಲಿಸಿರುವ ಮೇಲ್ಕಂಡ ಮನವಿಯಲ್ಲಿ ತಮ್ಮ ಮೇಲೆ ವಿಧಿಸಿರುವ ದಂಡನೆಯನ್ನು ರದ್ದುಗೊಳಿಸಲು ಕೋರಿದ್ದಾರೆ.

ಶ್ರೀ ಸೈಯದ್ ಸತ್ತಾರ್ ನಿವೃತ್ತ ಪತ್ರಾಂಕಿತ ಸಹಾಯಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ರವರು ಸಲ್ಲಿಸಿರುವ ಮೇಲ್ಮನವಿ ಮತ್ತು ತತ್ಸಂಬಂಧ ಪರಿಶೀಲನಾ ಟಿಪ್ಪಣಿ ಈ ಕೆಳಕಂಡಂತಿರುತ್ತದೆ.

| | ಮೇಲ್ಮನವಿ ಕಂಡಿಕೆ | ಷರಾ |
|---|---|---|
| 1 | ಅಪೀಲುದಾರರು ಎರಡನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ಪ್ರತಿ ರಕ್ಷಣಾ ಹೇಳಿಕೆಗಳನ್ನು ಶಿಸ್ತು ಪ್ರಾಧಿಕಾರಿಯು ಪರಿಗಣಿಸಿರುವುದಿಲ್ಲ–ಶಿಸ್ತು ಪ್ರಾಧಿಕಾರಿಯವರು ನೀಡಿರುವ ಎರಡನೇ ಕಾರಣ ಕೇಳುವ ನೋಟೀಸಿಗೆ ಅಪೀಲುದಾರರು | The Disciplinary authority has considered in detail the reply submitted by AGO taking into consideration the findings in the |

| | | |
|---|---|---|
| | ದಿನಾಂಕ: 17.1.05ರ ಪ್ರತಿ ರಕ್ಷಣಾ ಹೇಳಿಕೆಗಳನ್ನು ಸಲ್ಲಿಸಿದ್ದು, ಅನುಬಂಧ-1ರ ದಂಡನಾದೇಶದ 3ನೇ ಪುಟದಲ್ಲಿ ಕೆಲವು ಅಂಶಗಳನ್ನು ಮಾತ್ರ ನಮೂದಿಸಲಾಗಿದೆ. ಆದರೆ ನಮೂದಿಸಿರುವ ಯಾವುದೇ ಅಂಶಗಳನ್ನು ಪರಿಗಣಿಸದೇ ದಂಡನಾದೇಶದ 4ನೇ ಪುಟದಲ್ಲಿ ^ಅಧಿಕಾರಿಗಳ ಉತ್ತರದಲ್ಲಿ ಮನಗಾಣುವಂತಹ ಅಂಶಗಳು ಇಲ್ಲದೇ ಇರುವುದರಿಂದ^ ಎಂದು ನಮೂದಿಸಿ ದಂಡನೆಯನ್ನು ವಿಧಿಸಲಾಗಿದೆ. ಎರಡನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ಉತ್ತರಗಳನ್ನು ಶಿಸ್ತು ಪ್ರಾಧಿಕಾರಿಯು ಪರಿಗಣಿಸಿ ಆದೇಶ ಮಾಡಬೇಕಾಗಿದೆ. ಆದರೆ ಅವುಗಳನ್ನು ಪರಿಗಣಿಸದೆ ಉತ್ತರಗಳಲ್ಲಿ ಮನಗಾಣುವಂತಹ ಅಂಶಗಳು ಇಲ್ಲದೆ ಇರುವುದರಿಂದ ಎಂದು ನಮೂದಿಸಿ ಆದೇಶಿಸಿರುವುದು ಶಿಸ್ತು ಪ್ರಾಧಿಕಾರಿಯವರು ಸರಿಯಾದ ಪರಿಗಣನೆ ಮಾಡದೇ ಆದೇಶಿಸಿರುವಂತಾಗಿದೆ. ಈ ಹಿನ್ನೆಲೆಯಲ್ಲಿ ಎರಡನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ಪ್ರತಿರಕ್ಷಣಾ ಹೇಳಿಕೆಗಳ ಪ್ರತಿಯನ್ನು ಅನುಬಂಧ-2ರಲ್ಲಿ ಲಗತ್ತಿಸಿದೆ. ಸದರಿ ಅಂಶಗಳನ್ನು ಅಪೀಲು ಪ್ರಾಧಿಕಾರಿಯವರು ಈ ಅಪೀಲಿನ ಅಂಶಗಳೆಂದು ಪರಿಗಣಿಸಲು ಕೋರಲಾಗಿದೆ. | Enquiry report as well as the available evidence on records. Hence the averments made by the appellant that the disciplinary authority has not gone through the explanation of the AGO in the 2nd Show Cause Notice is not correct. |
| 2 | ವಿಚಾರಣಾ ವರದಿಯು ನಿಯಮಾನುಸಾರ ಇರುವುದಿಲ್ಲ-ಶಿಸ್ತು ಪ್ರಾಧಿಕಾರಿಯವರು ಪ್ರತ್ಯೇಕವಾದ ಹತ್ತು ಆರೋಪಗಳನ್ನು ಮಾಡಿದ್ದು, ಪ್ರತಿಯೊಂದು ಆರೋಪದ ಬಗ್ಗೆ ಆಪಾದಿತರು ವಿವರವಾದ ಲಿಖಿತ ವಾದಗಳನ್ನು ಮಂಡಿಸಿರುತ್ತಾರೆ. ವಿಚಾರಣಾಧಿಕಾರಿಯವರು ಪ್ರತಿಯೊಂದು ಆರೋಪದ ಬಗ್ಗೆ ಪ್ರತ್ಯೇಕವಾದ ವಿಶ್ಲೇಷಣೆ ನಡೆಸದೆ ಎಲ್ಲಾ ಹತ್ತು ಆರೋಪಗಳನ್ನೂ ಸಂಯೋಜಿಸಿ ನಿರ್ಣಯ ನೀಡಿರುತ್ತಾರೆ. ಈ ರೀತಿ ಎಲ್ಲಾ ಆರೋಪಗಳ ಬಗ್ಗೆ ಒಟ್ಟಾಗಿ ನಿರ್ಣಯ ನೀಡಿರುವುದು ಕೆ.ಸಿ.ಎಸ್ (ಸಿಸಿಎ) ನಿಯಮಗಳು, 1957ರ 11ನೇ (23)ನೇ ಉಪ-ನಿಯಮದ (i) (ಡಿ) ಖಂಡಕ್ಕೆ ವ್ಯತಿರಿಕ್ತವಾಗಿದೆ, ಏಕೆಂದರೆ ಸದರಿ ಖಂಡವು the report shall contain the findings on each article of charge and the reasons there for ಎಂದು ಉಪಬಂಧ ಹೊಂದಿದೆ. ಪ್ರತಿಯೊಂದು ಆರೋಪದ ಬಗ್ಗೆ ಪ್ರತ್ಯೇಕ ನಿರ್ಣಯ ಹಾಗೂ ಪ್ರತ್ಯೇಕ ಕಾರಣಗಳನ್ನು ದಾಖಲಿಸದೆ ಇರುವುದರಿಂದ ವಿಚಾರಣಾ ವರದಿಯು ನಿಯಮ 11 (23)(i)(ಡಿ)ಗೆ ವ್ಯತಿರಿಕ್ತವಾಗಿದೆ. | The Enquiry Officer has given detailed reasoning in respect of each charge and given his over all conclusion on the entire charges. Hece there is no violation of procedure in the enquiry proceedings. |
| 3 | ವಿಚಾರಣಾ ವರದಿಯಲ್ಲಿ ಪ್ರತಿಯೊಂದು ಆರೋಪದ ಬಗ್ಗೆ ಸಾಕ್ಷಾಧಾರಗಳ ಮೌಲ್ಯ ಮಾಪನ ಇರುವುದಿಲ್ಲ-ಕೆ.ಸಿ.ಎಸ್. (ಸಿಸಿಎ) ನಿಯಮಗಳು, 1957ರ 11ನೇ (23)ನೇ ಉಪ-ನಿಯಮದ (i) (ಡಿ) ಖಂಡದ ಅನ್ವಯ a report shall be prepared and it shall contain as assessment of evidence in respect of each articies of charge ಎಂದಿದೆ. ಆದರೆ ಪ್ರಸ್ತುತ ವಿಚಾರಣಾ ವರದಿಯಲ್ಲಿ ಹತ್ತು ಆರೋಪಗಳ ಬಗ್ಗೆ ಪ್ರತ್ಯೇಕವಾಗಿ ಸಾಕ್ಷಾಧಾರಗಳ ವಿಶ್ಲೇಷಣೆ ಮಾಡಿರುವುದಿಲ್ಲ. ಆದ್ದರಿಂದ ವಿಚಾರಣಾ ವರದಿಯು ನಿಯಮಗಳಿಗೆ ವ್ಯತಿರಿಕ್ತವಾಗಿದೆ ಹಾಗೂ ಪ್ರತಿಯೊಂದು ಆರೋಪದ ಬಗ್ಗೆ ಸಾಕ್ಷಾಧಾರಗಳ ವಿಶ್ಲೇಷಣೆಯನ್ನು ಹೊಂದಿರುವುದಿಲ್ಲ. | Reply in Para No.2 holds good. |

| | | |
|---|---|---|
| 4 (1) ರಿಂದ (14) | ವಿಚಾರಣಾಧಿಕಾರಿಯವರು ಆಪಾದಿತರು ಮಂಡಿಸಿರುವ ಅಂಶಗಳನ್ನು ಪರಿಗಣಿಸಿರುವುದಿಲ್ಲ. ಅಪೀಲುದಾರರು ಅಂದರೆ ವಿಚಾರಣೆಯಲ್ಲಿ ಆಪಾದಿತರು ತಮ್ಮ ಲಿಖಿತವಾದದಲ್ಲಿ ಮಂಡಿಸಿದರುವ ಅಂಶಗಳನ್ನು ವಿಚಾರಣಾಧಿಕಾರಿಯವರು ಪರಿಗಣಿಸಿರುವುದಿಲ್ಲ. ಸದರಿ ವಾದದ ಅಂಶಗಳನ್ನು ಈ ಕೆಳಗೆ ನಮೂದಿಸಲಾಗಿದೆ. ಇವುಗಳನ್ನು ಪ್ರಸ್ತುತ ಅಪೀಲಿನ ಅಂಶಗಳೆಂದು ಪರಿಗಣಿಸಲು ಕೋರಲಾಗಿದೆ. | In these paras the Appellant states that the Enquiry officer has not considered in detail his written statement, that the Enquiry officer has not considered his stand that the action taken in good faith cannot be considered as misconduct and that the Zilla Panchayat has taken a decision in the interest of public, that the purchase of drugs being a technical matter there is no role of his which has not been considered etc.<br>All these averments have been considered by the Enquiry officer before giving his report. It is opined by the Enquiry officer that all the AGOs including the Appellant are all in one way or the other responsible in the issue under question. Therefore, there is no justification to consider the same grounds that have been offered now in his defence. |
| | ^1. ಒಂದನೇ ಆರೋಪದ ಬಗ್ಗೆ:–<br>ಒಂದನೇ ಆರೋಪವು ರಾಜ್ಯದಲ್ಲಿ ಕುಟುಂಬ ಕಲ್ಯಾಣ ಶಸ್ತ್ರ ಚಿಕಿತ್ಸೆಗೆ ಒಳಪಡುವ ಫಲಾನುಭವಿಗಳಿಗೆ ನೀಡಲು 15 ವಿಧವಾದ ಔಷಧಿಗಳನ್ನು ಭಾರತ ಸರ್ಕಾರದವರು ನಿಗದಿಪಡಿಸಿರುತ್ತಾರೆ. ಅವುಗಳನ್ನು ಸರ್ಕಾರಿ ಔಷಧಿ ಮಳಿಗೆಯಿಂದ ಒದಗಿಸಲಾಗುತ್ತಿದೆ ಎಂಬ ಅಂಶವನ್ನು ಮೇಲಧಿಕಾರಿಗಳು ಗಮನಕ್ಕೆ ತರಲು ವಿಫಲರಾಗಿರುತ್ತೀರಿ. ಔಷಧಿಯಲ್ಲದ ರಾಸಾಯನಿಕವನ್ನು ಅದು ಹೆಚ್ಚಿನ ಬೆಲೆಯಲ್ಲಿ ಸರ್ಕಾರಿ ಹಣ ನೀಡಿ ಖರೀದಿಸಲು ಶಿಫಾರಸ್ಸು ಮಾಡಿ ಕರ್ತವ್ಯ ಲೋಪವೆಸಗಿರುತ್ತೀರಿ. ನಿಮ್ಮ ಅಧಿಕಾರ ವ್ಯಾಪ್ತಿ ಮೀರಿ ಸದರಿ ರಾಸಾಯನಿಕವನ್ನು ಖರೀದಿಸಲು ಶಿಫಾರಸ್ಸು ಮಾಡಿರುತ್ತೀರಿ. ಇದರಿಂದ ಸರ್ಕಾರಕ್ಕೆ ರೂ. 18.82 ಲಕ್ಷಗಳಷ್ಟು ಆರ್ಥಿಕ ನಷ್ಟ ಉಂಟು ಮಾಡಿರುತ್ತೀರಿ. ಆದ್ದರಿಂದ ಈ ಆರೋಪ. | – ಅದೇ – |
| | **(ಅ) ಒಂದನೇ ಆರೋಪದ ಬಗ್ಗೆ ಸಾಕ್ಷಾಧಾರಗಳ ವಿಶ್ಲೇಷಣೆ :**<br>(i) ಸಾಕ್ಷಿದಾರರು ವಿಷಯದ ಬಗ್ಗೆ ಮಾಹಿತಿ ಹೊಂದಿರುವುದಿಲ್ಲ. ಆರೋಪದ ಬಗ್ಗೆ ಡಾ: ಜೆ.ಎಸ್.ರಾಜು, ಜಂಟಿ ಯೋಜನಾಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು ಇವರು ಶಿಸ್ತು ಪ್ರಾಧಿಕಾರಿಯ ಪರ ಸಾಕ್ಷಿ ನುಡಿದಿರುತ್ತಾರೆ. ಸದರಿ ಸಾಕ್ಷಿಯು ದಿನಾಂಕ: 1.7.2004 ರಿಂದ ಜಂಟಿ ಯೋಜನಾಧಿಕಾರಿಯಾಗಿ ಸೇವೆ | – ಅದೇ – |

| | | |
|---|---|---|
| | ಸಲ್ಲಿಸುತ್ತಿದ್ದು, ಡಾ: ಎಸ್.ಎಂ.ಜಂಗ್ಗೆ, ಯೋಜನಾ ನಿರ್ದೇಶಕರು ಸಲ್ಲಿಸಿರುವ ತನಿಖಾ ವರದಿ ನಿಶಾನೆ ಪಿ–1ನ್ನು ಗುರುತಿಸಿ ಸಾಕ್ಷಿ ನುಡಿದಿದ್ದಾರೆ. ಇವರು ಪ್ರಕರಣದ ತನಿಖೆ ನಡೆಸದೆ ಇರುವುದರಿಂದ ಇವರಿಗೆ ವಿಷಯದ ಬಗ್ಗೆ ಪ್ರತ್ಯೇಕ ಮಾಹಿತಿ ಇರುವುದಿಲ್ಲ. | |
| | (ii) 15 ವಿಧವಾದ ಔಷಧಿಗಳ ಹೊರತು ಬೇರೆ ಔಷಧಿಗಳನ್ನು ಖರೀದಿಸಬಾರದು ಎಂಬ ಬಗ್ಗೆ ಪ್ರತಿಬಂಧ ಇರುವುದಿಲ್ಲ. ನಿಶಾನೆ ಪಿ–5ಕ್ಕೆ ಲಗತ್ತಿಸಿರುವ ಪಟ್ಟಿಯಲ್ಲಿ ನಮೂದಿಸಿರುವ ಔಷಧಿಗಳ ಪೈಕಿ ಆಂಟಿಬಯಟಿಕ್ಸ್‌ಗಳನ್ನು ಬಿಟ್ಟು ಮಿಕ್ಕೆಲ್ಲವನ್ನು ಕೊಳ್ಳಬೇಕು ಎಂಬುದಾಗಿ ಕಲ್ಪಿಸಲಾಗಿದೆ. ಆದರೆ ಹೊಸ ಔಷಧಿಗಳನ್ನು ಖರೀದಿಸಬಾರದು ಎಂದು ಯಾವ ಕಡತವು ಹೇಳುವುದಿಲ್ಲ. ಈ ಕಾರಣಕ್ಕಾಗಿ ನನ್ನ ವಾದವನ್ನು ಅವರು ಎತ್ತಿ ಹಿಡಿಯಬೇಕಾಗಿತ್ತು. ಮಾರುಕಟ್ಟೆಯಲ್ಲಿ ಬರುವ ಹೊಸ ಸಂಶೋಧನೆಗಳ ಲಾಭವು ಸಾರ್ವಜನಿಕರಿಗೆ ಲಭ್ಯವಾಗಬೇಕೆಂಬ ಸದುದ್ದೇಶದಿಂದ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. | – ಅದೇ – |
| | (iii) ಔಷಧಿಗೆ ಮುಖ ಬೆಲೆಯನ್ನೇ ನೀಡಲಾಗಿದೆ. ಹೆಚ್ಚಿನ ಮೊಬಲಗನ್ನು ನೀಡಿರುವುದಿಲ್ಲ. 1ನೇ ಆರೋಪದಲ್ಲಿ ಆಪಾದಿಸಿರುವಂತೆ ಖರೀದಿಸಿರುವ ಔಷಧಿಗೆ ಸರಿಯಾದ ಬೆಲೆ ಅಂದರೆ ರೂ. 275.50ನ್ನು ನೀಡಿ ಖರೀದಿಸಲಾಗಿದೆ. ಯಾವುದೇ ಹೆಚ್ಚಿನ ಮೊಬಲಗನ್ನು ನೀಡಿರುವುದಿಲ್ಲ. | – ಅದೇ – |
| | (iv) ಔಷಧಿ ಖರೀದಿ ಆದೇಶವನ್ನು ಜಿಲ್ಲಾ ಪಂಚಾಯಿತಿಯ ಶಿಕ್ಷಣ ಮತ್ತು ಆರೋಗ್ಯ ಸ್ಥಾಯಿ ಸಮಿತಿಯ ಅನುಮೋದನೆಯೊಂದಿಗೆ ಖರೀದಿಸಲಾಗಿದೆ. ಆಪಾದಿತ ಅಧಿಕಾರಿಯು ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಔಷಧಿಯನ್ನು ಖರೀದಿಸಿರುವುದಿಲ್ಲ. ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯಲ್ಲಿ ದಿ: 25.2.02ರಂದು ತೆಗೆದುಕೊಂಡ ನಿರ್ಣಯದನ್ವಯ ಖರೀದಿಸಲಾಗಿದೆ. ಈ ಕಾರಣಕ್ಕಾಗಿ ನಾನು ತಪ್ಪಿತಸ್ಥ ಎಂದು ಹೇಳಲಾಗುವುದಿಲ್ಲ. | |
| | 1ನೇ ಆರೋಪದ ಬಗ್ಗೆ 3ನೇ ಆಪಾದಿತ ಅಧಿಕಾರಿಯವರ ಸಮರ್ಥನೆ: ಮೂರನೇ ಆಪಾದಿತ ಅಧಿಕಾರಿಯು ಆಡಳಿತ ಸಿಬ್ಬಂದಿಯಾಗಿರುತ್ತಾರೆ. ಔಷಧಿ ಬಗ್ಗೆ ಅವರಿಗೆ ಮಾಹಿತಿ ಇರುವುದಿಲ್ಲ. 2ನೇ ಆಪಾದಿತ ಅಧಿಕಾರಿಗಳು ಹಾಗೂ 1ನೇ ಆಪಾದಿತ ಅಧಿಕಾರಿಯವರ ಅಧ್ಯಕ್ಷತೆಯಲ್ಲಿ ಸಭೆ ನಡೆಸಿ, ಈ ಸಭೆಯಲ್ಲಿ ಬೀದರ್ ಜಿಲ್ಲೆಯ ಎಲ್ಲಾ ತಾಲ್ಲೂಕು ಆರೋಗ್ಯ ಅಧಿಕಾರಿಗಳು ಹಾಗೂ ಶಸ್ತ್ರ ಚಿಕಿತ್ಸಕರು ಉಪಸ್ಥಿತರಿದ್ದರೆಂದು ತಿಳಿಸಿರುವ ಪ್ರಯುಕ್ತ ಇದರಂತೆ 2ನೇ ಆಪಾದಿತ ಅಧಿಕಾರಿಗಳು ಪ್ರಸ್ತಾವನೆಯಲ್ಲಿ ಸ್ಪಷ್ಟವಾಗಿ ಹೊಸ ಪ್ರಾಡಕ್ಟ್ ಹಾಗೂ ಬೆಲೆ ಮತ್ತು ಔಷಧಿ ಖರೀದಿ ಮಾಡಬೇಕಾದ ಕಂಪನಿಯ ಹೆಸರನ್ನು ನಮೂದಿಸಿ ದಿ: 25.2.02 ರಂದು ಆರೋಗ್ಯ ಮತ್ತು ಶಿಕ್ಷಣ ಉಪ ಸಮಿತಿಯಲ್ಲಿ ಪ್ರಸ್ತಾಪಿಸಿದ್ದಕ್ಕಾಗಿ ಈ ಪ್ರಸ್ತಾವನೆಯ ಅನುಸಾರ ಉಪ ಸಮಿತಿಯಿಂದ ಅನುಮೋದನೆ ನೀಡಲಾಯಿತು. ಅದರ ಫಲಿತಾಂಶ ಸ್ವರೂಪ ಕಡತ ಎಸ್.ಯು.ಪಿ. 21/2001–02 ದಿ: 28.3.02 / 30.3.02ರ 2ನೇ ಆಪಾದಿತ ಅಧಿಕಾರಿ (ಮೇಲಧಿಕಾರಿಗಳ) ಮಾರ್ಗದರ್ಶನದಂತೆ | |

| | | |
|---|---|---|
| | ಬೆರಳಚ್ಚಿಸಿದ ಸಿದ್ಧಪಡಿಸಿದ 2ನೇ ಆಪಾದಿತರು ಸಹಿ ಮಾಡಿದ ಟಿಪ್ಪಣಿಯನ್ನು ಮೂರನೇ ಆಪಾದಿತರ ಗಮನಕ್ಕೆ ತಂದು ಸದರಿ ಟಿಪ್ಪಣಿ ಅನುಮೋದನೆ ಬಂದ ನಂತರ ಕಡತ ಸಂಖ್ಯೆ: ಎಸ್.ಯು.ಪಿ. 75/2001–02, ದಿ: 30.3.02 1ನೇ ಆಪಾದಿತ ಅಧಿಕಾರಿಗಳು ಆಡಳಿತಾತ್ಮಕ ಮಂಜೂರಾತಿ ನೀಡಿರುತ್ತಾರೆ. ಇದರೊಳಗೆ ಮೂರನೇ ಆಪಾದಿತ ಅಧಿಕಾರಿ ವತಿಯಿಂದ ಯಾವುದೇ ಸ್ವಂತ ಟಿಪ್ಪಣಿ ಹಾಗೂ ಶಿಫಾರಸ್ಸು ಮಾಡಿರುವುದಿಲ್ಲ ಹಾಗೂ ಸರ್ಕಾರಕ್ಕೆ ಯಾವುದೇ ಪ್ರಕಾರ ಹಣದ ನಷ್ಟ ಮಾಡಿರುವುದಿಲ್ಲ. ಆದ್ದರಿಂದ 1ನೇ ಆರೋಪ ನನ್ನ ವಿರುದ್ಧ ಸಾಬೀತಾಗಿಲ್ಲ ಎಂದು ಪರಿಗಣಿಸಲು ಕೋರಿದೆ. | |
| | **2. ಎರಡನೇ ಆರೋಪದ ಬಗ್ಗೆ:**<br>ಎರಡನೇ ಆರೋಪವು ನಿಗದಿತ ಅನುದಾನಕ್ಕಿಂತ ರೂ. 5,11,669.00 ಗಳ ಹೆಚ್ಚು ಸರ್ಕಾರಿ ಹಣವನ್ನು ಖರ್ಚು ಮಾಡಿ (ರೂ. 17,99,346.00) ಕುಟುಂಬ ಕಲ್ಯಾಣ ಶಸ್ತ್ರ ಚಿಕಿತ್ಸೆಯ ನಂತರ ಉಪಯೋಗಕ್ಕೆ ಅನುಮೋದನೆ ಇಲ್ಲದಿರುವ ರಾಸಾಯನಿಕ ಪದಾರ್ಥವನ್ನು ಖರೀದಿಸಲು ಶಿಫಾರಸ್ಸು ಮಾಡಿ ಸರ್ಕಾರಿ ಹಣ ದುರುಪಯೋಗಕ್ಕೆ ಕಾರಣರಾಗಿರುತ್ತೀರಿ. ಈ ವೆಚ್ಚವು ಕೇಂದ್ರ ಪುರಸ್ಕೃತ ಯೋಜನೆಯಲ್ಲಿ ಶೇ. 100ರ ಅಡಿಯಲ್ಲಿ ರಾಜ್ಯ ಸರ್ಕಾರಕ್ಕೆ ಮರು ಪಾವತಿಯಾಗುವುದಿಲ್ಲ ಎಂಬ ಅಂಶವನ್ನು ಮುಚ್ಚಿಟ್ಟು ದುರ್ನಡತೆ ಎಸಗಿದ್ದೀರಿ. | – ಅದೇ – |
| | **(ಅ) ಎರಡನೇ ಆರೋಪದ ಬಗ್ಗೆ ಸಾಕ್ಷಾಧಾರಗಳ ವಿಶ್ಲೇಷಣೆ:**<br>(i) ಬೀದರ ಜಿಲ್ಲೆಯ ಎಲ್ಲಾ ತಾಲ್ಲೂಕ ಆರೋಗ್ಯ ಅಧಿಕಾರಿಗಳು ಮತ್ತು ಶಸ್ತ್ರ ಚಿಕಿತ್ಸಕರು ಹೊಸ ಪ್ರಾಡಾಕ್ಟ್‌ದ ಉಪಯೋಗ ಯೋಗ್ಯವೆಂದು ಕಂಡುಹಿಡಿದ ನಂತರ ಆರ್ಥಿಕ ಇಲಾಖೆಯ ಅನುಮೋದನೆಯೊಂದಿಗೆ ಮೊಬಲಗನ್ನು ವೆಚ್ಚ ಮಾಡಲಾಗಿದೆ. ನಿಶಾನೆ ಪಿ–4 ರಲ್ಲಿ ಆರ್ಥಿಕ ಇಲಾಖೆಯ ಅನುಮೋದನೆಯನ್ನು ಪಡೆದು ಔಷಧಿಯನ್ನು ಖರೀದಿಸಲಾಗಿದೆ. ಕೇಂದ್ರ ಸರ್ಕಾರದಿಂದ ಈ ಬಗ್ಗೆ ಮರು ಪಾವತಿಕೋರಬಹುದು. ಇದು ಹೊಸ ಔಷಧಿಯಾದ್ದರಿಂದ ಜಿಲ್ಲಾ ಪಂಚಾಯಿತಿಯ ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯ ಅನುಮೋದನೆ ಪಡೆಯಲಾಗಿದೆ. | |
| | (ii) ಹೊಸ ಔಷಧಿಯನ್ನು ಖರೀದಿಸುವ ಪೂರ್ವದಲ್ಲಿ ವೆಚ್ಚ ಮರು ಪಾವತಿಯ ಬಗ್ಗೆ ಜಿಲ್ಲಾ ಪಂಚಾಯಿತಿಯು ಪರಿಗಣಿಸಿರುವುದಿಲ್ಲ. ಹೊಸ ಔಷಧಿಯನ್ನು ಸಾರ್ವಜನಿಕರಿಗೆ ಉಪಯುಕ್ತವಾಗುವ ಹಿನ್ನೆಲೆಯಲ್ಲಿ ಖರೀದಿಸಲಾಗಿದೆ. ಆದರೆ ಈ ವೆಚ್ಚವನ್ನು ಕೇಂದ್ರ ಸರ್ಕಾರವು ಭರಿಸಬೇಕು ಎಂಬ ಚಿಂತನೆಯು ಜಿಲ್ಲಾ ಪಂಚಾಯಿತಿಯಲ್ಲಿ ಇರಲಿಲ್ಲ. ಈ ಹಿನ್ನೆಲೆಯಲ್ಲಿ ಮರು ಪಾವತಿಯ ಅಂಶವನ್ನು ಮರೆಮಾಚುವ ಪ್ರಶ್ನೆ ಉದ್ಭವಿಸುವುದಿಲ್ಲ. | |
| | (iii) ಈ ಆರೋಪದ ಬಗ್ಗೆ ಸಾಕ್ಷಿದಾರರ ಪ್ರತ್ಯೇಕ ಸಾಕ್ಷಿ ನುಡಿದಿರುವುದಿಲ್ಲ. ಶಿಸ್ತು ಪ್ರಾಧಿಕಾರಿಯ ಪರ ಸಾಕ್ಷಿದಾರರಾದ ಡಾ: ಜಿ.ಎನ್.ರಾಜು ಇವರು ಈ ಆರೋಪದ ಬಗ್ಗೆ ಪ್ರತ್ಯೇಕವಾದ ಸಾಕ್ಷಿನುಡಿದಿರುವುದಿಲ್ಲ. ಆದ್ದರಿಂದ ಈ ಆರೋಪ ಸಾಬೀತಾಗಿರುವುದಿಲ್ಲವೆಂದು ಪರಿಗಣಿಸಲು ಕೋರಿದೆ. | |

| | | |
|---|---|---|
| | **2ನೇ ಆರೋಪದ ಬಗ್ಗೆ 3ನೇ ಆಪಾದಿತ ಅಧಿಕಾರಿಯವರ ಸಮರ್ಥನೆ:** ರೂ. 5,11,669.00 ಗಳು ಹೆಚ್ಚು ಸರ್ಕಾರಿ ಹಣವನ್ನು ಯಾವ ಲೆಕ್ಕಾಚಾರದ ಆಧಾರದಿಂದಾಗಿ ಎಂಬುವುದು ತಿಳಿದು ಬಂದಿರುವುದಿಲ್ಲ. ಲೆಕ್ಕ ಶೀರ್ಷಿಕೆ 2211-00-105-1-01 ಯೋಜನೆ ಜಿ.ಪಂ.ಬೀದರ ಲಿಂಕ್ ಡಾಕ್ಯೂಮೆಂಟದ ಅನುಸಾರ ಪೂರ್ತಿ ರೂ. 40,00,000.00 ಗಳು ಸರ್ಕಾರದಿಂದ ಬಿಡುಗಡೆಯಾಗಿತ್ತು. ಇದರಂತೆ ಕಡತ ಸಂಖ್ಯೆ: ಎಸ್.ಯು.ಪಿ/21/2001-02, ದಿನಾಂಕ: 28.3.02/30.3.02 ಮುಖ್ಯ ಲೆಕ್ಕಾಧಿಕಾರಿಗಳು ಜಿಲ್ಲಾ ಪಂಚಾಯತ್ ಬೀದರ್ ಇವರ ಜೊತೆ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು ಬೀದರ್ ಚರ್ಚೆ ನಡೆಸಿ ಸದರಿ ಕಡತವನ್ನು ಮಂಡಿಸಿರುತ್ತಾರೆ. ಈ ಕಡತದಲ್ಲಿ 3ನೇ ಆಪಾದಿತ ಅಧಿಕಾರಿಯ ಕಂಡಿಕೆ ಷರಾ ಇರುವುದಿಲ್ಲ. ಈ ವಿಷಯದಲ್ಲಿ 3ನೇ ಆಪಾದಿತರು ಯಾವುದೇ ದುರ್ನಡತೆ ಮಾಡಿರುವುದಿಲ್ಲ. | |
| | **3ನೇ ಮೂರನೇ ಆರೋಪದ ಬಗ್ಗೆ:** ಮೂರನೇ ಆರೋಪವು ಬೀದರ್ ಜಿಲ್ಲೆಯ ಯಾವುದೇ ಶಸ್ತ್ರ ಚಿಕಿತ್ಸೆ ತಜ್ಞರು ಹಾಗೂ ವೈದ್ಯರುಗಳಿಂದ ಬೇಡಿಕೆಯು ಬಂದಿದೆಯೇ ಇಲ್ಲವೇ ಎಂಬುದನ್ನು ಪರಿಶೀಲಿಸದೆ ಔಷಧಿ ಖರೀದಿಸಲು ಮೇಲಧಿಕಾರಿಗಳಿಗೆ ಶಿಫಾರಸ್ಸು ಮಾಡಿ ದುರ್ನಡತೆ ಎಸಗಿರುತ್ತೀರಿ. | |
| | **(ಅ) ಮೂರನೇ ಆರೋಪದ ಬಗ್ಗೆ ಸಾಕ್ಷ್ಯಾಧಾರಗಳ ವಿಶ್ಲೇಷಣೆ:** (i) ತಾಲ್ಲೂಕು ವೈದ್ಯಾಧಿಕಾರಿಗಳು ಹಾಗೂ ಇತರೆ ಪರಿಣತರು ಔಷಧಿಯ ಬಗ್ಗೆ ಶಿಫಾರಸ್ಸುಗಳನ್ನು ಮಾಡಿರುತ್ತಾರೆ. ವಿಚಾರಣೆಯಲ್ಲಿ ದಾಖಲಿಸಿರುವ ನಿಶಾನೆ ಡಿ-2 ನೋಡಬಹುದು. ದಿ: 25.2.02 ರಂದು ಸ್ಥಾಯಿ ಸಮಿತಿಯ ಸಭೆಗೆ ಜಿಲ್ಲೆಯ ಎಲ್ಲಾ ವೈದ್ಯಾಧಿಕಾರಿಗಳು ಹಾಜರಿದ್ದು, ವಿಡಿಯೋ ಪ್ರದರ್ಶನವನ್ನು ವೀಕ್ಷಿಸಿರುತ್ತಾರೆ. ಇದರ ಬಗ್ಗೆ ಚರ್ಚೆಯು ನಡೆದ ನಂತರ ಔಷಧಿಯ ಖರೀದಿಗೆ ನಿರ್ಣಯ ತೆಗೆದುಕೊಳ್ಳಲಾಗಿದೆ. ಆದ್ದರಿಂದ ವೈದ್ಯರ ಬೇಡಿಕೆ ಇಲ್ಲದೆ ರಾಸಾಯನಿಕವನ್ನು ಖರೀದಿಸಲಾಗಿದೆ ಎಂಬ ಆರೋಪವನ್ನು ನನ್ನ ಮೇಲೆ ಎಸೆಯಲು ಬರುವುದಿಲ್ಲ. | |
| | **(ii) ನಿಶಾನೆ ಪಿ-1ರ ತನಿಖಾ ವರದಿಯಲ್ಲಿ ಔಷಧಿಯ ಬಗ್ಗೆ ಚರ್ಚೆ ನಡೆದಿರುವುದನ್ನು ಒಪ್ಪಲಾಗಿದೆ:** ನಿಶಾನೆ ಪಿ-1ರ ತನಿಖಾ ವರದಿಯಲ್ಲಿ ದಿ: 25.2.02 ರಂದು ನಡೆದ ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯಲ್ಲಿ ಔಷಧಿಯ ಖರೀದಿ ಬಗ್ಗೆ ಚರ್ಚೆ ನಡೆದಿರುವುದನ್ನು ನಮೂದಿಸಲಾಗಿದೆ. ಸದರಿ ಚರ್ಚೆಯಲ್ಲಿ ಜಿಲ್ಲೆಯ ವೈದ್ಯಾಧಿಕಾರಿಗಳು ಹಾಜರಿದ್ದು, ಇದು ಉತ್ತಮ ಔಷಧಿಯೆಂದು ತಿಳಿಸಿರುತ್ತಾರೆ. ಆದ್ದರಿಂದ ಬೇಡಿಕೆಗೆ ಅನುಗುಣವಾಗಿ ಇದನ್ನು ಖರೀದಿಸಲಾಗಿದೆ. | |
| | **3ನೇ ಆರೋಪದ ಬಗ್ಗೆ 3ನೇ ಆಪಾದಿತರ ಸಮರ್ಥನೆ:** 2ನೇ ಆಪಾದಿತ ಅಧಿಕಾರಿಯು ನಿಗದಿಪಡಿಸಿದ ಗುರಿ ಹಾಗೂ ಮುಂದಿನ ವರ್ಷದ ಗುರಿ ಈ ಎರಡನ್ನು ಭಾವಿಸಿ ಪ್ರಸ್ತಾವನೆ | |

| | | |
|---|---|---|
| | ಮಂಡಿಸಿರುತ್ತಾರೆ. ನಿಶಾನೆ ಪಿ-2ರ ಕಡತ ನೋಡುವುದು. ಈ ವಿಷಯದಲ್ಲಿ 3ನೇ ಆಪಾದಿತ ಅಧಿಕಾರಿಯು ಯಾವುದೇ ದುರ್ನಡತೆ ಮಾಡಿರುವುದಿಲ್ಲ. ಈ ಆರೋಪ 3ನೇ ಆಪಾದಿತರ ಕರ್ತವ್ಯಕ್ಕೆ ಸಂಬಂಧವಿಲ್ಲದ ಪ್ರಯುಕ್ತ ಸಂಪೂರ್ಣವಾಗಿ ಅಲ್ಲಗಳೆಯಲಾಗಿದೆ. | – ಅದೇ – |
| | **4ನೇ ನಾಲ್ಕನೇ ಆರೋಪದ ಬಗ್ಗೆ:** ನಾಲ್ಕನೇ ಆರೋಪವು ರಾಜ್ಯ ಸರ್ಕಾರದ ಆರ್ಥಿಕ ಇಲಾಖೆಯಿಂದ ಪುನರ್ ವಿನಿಯೋಗ ತಿಳುವಳಿಕೆ ಪರವಾನಗಿ ಮಂಜೂರಾತಿ ಬರುವ ಮುಂಚೆಯೇ ಅಂದರೆ ದಿ: 30.3.02 ರಂದು ಎಂಟು ಸರಬರಾಜು ಆದೇಶಗಳನ್ನು ಬಿಡಿ ಬಿಡಿಯಾಗಿ ನೀಡಲು ಶಿಫಾರಸ್ಸು ಮಾಡಿ ಕರ್ತವ್ಯ ಲೋಪವೆಸಗಿರುತ್ತೀರಿ. | – ಅದೇ – |
| | **(ಅ) ನಾಲ್ಕನೇ ಆರೋಪದ ಬಗ್ಗೆ ಸಾಕ್ಷ್ಯಾಧಾರಗಳ ವಿಶ್ಲೇಷಣೆ:** (i) ನಿಶಾನೆ ಪಿ-3 ಆದೇಶವು ದಿ: 30.3.02 ರಂದು ಫ್ಯಾಕ್ಸ್ ಮುಖಾಂತರ ಸ್ವೀಕೃತವಾಗಿದೆ. ನಿಶಾನೆ ಪಿ-3ರಲ್ಲಿ ಸರ್ಕಾರದ ಮಂಜೂರಾತಿ ಪರವಾನಗಿ ಆದೇಶವು ದಿ: 30.3.02 ರಂದು ಸ್ವೀಕೃತವಾಗಿದೆ. ಆ ದಿನ ಶನಿವಾರವಾಗಿತ್ತು. ಆದರೆ ನಿಶಾನೆ ಪಿ-3ರಲ್ಲಿ ಬೆರಳಚ್ಚು ದೋಷದಿಂದ ದಿ: 31.3.02 ರಂದು ಬೆರಳಚ್ಚು ಆಗಿದೆ. ಇದನ್ನು 30.3.02 ರಂದು ಭಾವಿಸಲು ಕೋರಿದೆ. | |
| | (ii) ಶಿಸ್ತು ಪ್ರಾಧಿಕಾರಿಯ ಪರ ಸಾಕ್ಷಿಯು ಇದನ್ನು ಪರಿಗಣಿಸಿರುವುದಿಲ್ಲ. ಡಾ: ಜೆ.ಎನ್.ರಾಜು ಇವರು ಪಾಟಿ ಸವಾಲಿನ ತಮ್ಮ ಉತ್ತರದಲ್ಲಿ ಪಿ-3 ರಲ್ಲಿ 31.3.02 ಎಂದು ಬರೆದಿದ್ದು, ಅಂದು ರವಿವಾರವಾದ್ದರಿಂದ ಆ ದಿನ 30.3.02 ಆಗಿರಬಹುದು ಎಂದು ಹೇಳಲು ಬರುವುದಿಲ್ಲ ಎಂದು ಸಾಕ್ಷಿ ನುಡಿದಿದ್ದಾರೆ. | |
| | **(iii) 4ನೇ ಆರೋಪದ ಬಗ್ಗೆ ಆಪಾದಿತರ ಸಮರ್ಥನೆ:** ಆರ್ಥಿಕ ಇಲಾಖೆಯ ಅನುಮೋದನೆಯು ನಿಶಾನೆ ಪಿ-3ರಲ್ಲಿ ದಿ: 30.3.02 ರಂದು ಸ್ವೀಕೃತವಾಯಿತು. ಅದರನ್ವಯ ಆದೇಶಗಳನ್ನು ಹೊರಡಿಸಲಾಗಿದೆ. ಆದ್ದರಿಂದ ಇದು ನಿಯಮಾನುಸಾರ ಇರುತ್ತದೆ. 4ನೇ ಆರೋಪವು ಸಾಬೀತಾಗಿರುವುದಿಲ್ಲವೆಂದು ಪರಿಗಣಿಸಿ ಆದೇಶ ಹೊರಡಿಸಲುಕೋರಲಾಗಿದೆ. | – ಅದೇ – |
| | ತಾಲ್ಲೂಕು ವೈದ್ಯಾಧಿಕಾರಿಗಳು ಹಾಗೂ ಇತರೆ ಪರಿಣತರು ಔಷಧಿಯ ಬಗ್ಗೆ ಶಿಫಾರಸ್ಸುಗಳನ್ನು ಮಾಡಿರುತ್ತಾರೆ. ವಿಚಾರಣೆಯಲ್ಲಿ ದಾಖಲಿಸಿರುವ ನಿಶಾನೆ ಡಿ-2 ನೋಡಬಹುದು. ದಿ: 25.2.02 ರಂದು ಸ್ಥಾಯಿ ಸಮಿತಿಯ ಸಭೆಗೆ ಜಿಲ್ಲೆಯ ಎಲ್ಲಾ ವೈದ್ಯಾಧಿಕಾರಿಗಳು ಹಾಜರಿದ್ದು, ವಿಡಿಯೋ ಪ್ರದರ್ಶನವನ್ನು ವೀಕ್ಷಿಸಿರುತ್ತಾರೆ. ಇದರ ಬಗ್ಗೆ ಚರ್ಚೆಯು ನಡೆದ ನಂತರ ಔಷಧಿಯ ಖರೀದಿಗೆ ನಿರ್ಣಯ ತೆಗೆದುಕೊಳ್ಳಲಾಗಿದೆ. ಆದ್ದರಿಂದ ವೈದ್ಯರ ಬೇಡಿಕೆ ಇಲ್ಲದೆ ರಾಸಾಯನಿಕವನ್ನು ಖರೀದಿಸಲಾಗಿದೆ ಎಂಬ ಆರೋಪ ಸಾಬೀತಾಗುವುದಿಲ್ಲ. | |
| | (ii) ನಿಶಾನೆ ಪಿ-1ರ ತನಿಖಾ ವರದಿಯಲ್ಲಿ ಔಷಧಿಯ ಬಗ್ಗೆ ಚರ್ಚೆ ನಡೆದಿರುವುದನ್ನು ಒಪ್ಪಲಾಗಿದೆ. ನಿಶಾನೆ ಪಿ-1ರ ತನಿಖಾ ವರದಿಯಲ್ಲಿ ದಿ: 25.2.02 ರಂದು ನಡೆದ ಶಿಕ್ಷಣ ಹಾಗೂ | |

| | | |
|---|---|---|
| | ಆರೋಗ್ಯ ಸ್ಥಾಯಿ ಸಮಿತಿಯಲ್ಲಿ ಔಷಧಿಯ ಖರೀದಿಯ ಬಗ್ಗೆ ಚರ್ಚೆ ನಡೆದಿರುವುದನ್ನು ನಮೂದಿಸಲಾಗಿದೆ. ಸದರಿ ಚರ್ಚೆಯಲ್ಲಿ ಜಿಲ್ಲೆಯ ವೈದ್ಯಾಧಿಕಾರಿಗಳು ಹಾಜರಿದ್ದು, ಇದು ಉತ್ತಮ ಔಷಧಿಯೆಂದು ತಿಳಿಸಿರುತ್ತಾರೆ. ಆದ್ದರಿಂದ ಬೇಡಿಕೆಗೆ ಅನುಗುಣವಾಗಿ ಇದನ್ನು ಖರೀದಿಸಲಾಗಿದೆ. | |
| | **4ನೇ ಆರೋಪದ ಬಗ್ಗೆ 3ನೇ ಆಪಾದಿತರ ಸಮರ್ಥನೆ:** ನಿಶಾನೆ ಪಿ–2ರ ಕಡತದಲ್ಲಿ ದಿ: 28.3.02 ರಂದು ಮುಖ್ಯ ಲೆಕ್ಕಾಧಿಕಾರಿಗಳು ಜಿಲ್ಲಾ ಪಂಚಾಯತ್ ಬೀದರ್ ಇವರಿಗೆ 2ನೇ ಆಪಾದಿತ ಅಧಿಕಾರಿಗಳು ಮಂಡಿಸಿದರು. ಅದರ ಅನುಮೋದನೆಯ ಪ್ರಕಾರ ಕ್ರಮ ಕೈಗೊಳ್ಳಲಾಗಿದೆ. 3ನೇ ಆಪಾದಿತರು ಮೇಲಧಿಕಾರಿಗಳ ಆದೇಶ ಪಾಲಿಸಿರುತ್ತಾರೆ. ಹಾಗೂ ಮೂರನೇ ಆಪಾದಿತರು ಅವರ ವತಿಯಿಂದ ಇಂತಹ ಶಿಫಾರಸ್ಸು ಮಾಡಿರುವುದಿಲ್ಲ. | |
| | **5ನೇ ಐದನೇ ಆರೋಪದ ಬಗ್ಗೆ:** ಐದನೇ ಆರೋಪವು ರಾಜ್ಯ ಸರ್ಕಾರದ ಪಾರದರ್ಶಕತೆಯ ಅಧಿನಿಯಮ, 2002 ರಿಂದ ತಪ್ಪಿಸಿಕೊಳ್ಳಲು ಪ್ರತಿ ಆದೇಶವನ್ನು ರೂ.1.00 ಲಕ್ಷಕ್ಕಿಂತ ಕಡಿಮೆ ದರಕ್ಕೆ ತಗ್ಗಿಸಿ ಒಂದೇ ಸಂಸ್ಥೆಗೆ ನಿಯಮಗಳನ್ನು ಪಾಲಿಸದೇ ಆದೇಶ ನೀಡಲು ಸಹಕರಿಸಿರುತ್ತೀರಿ. | – ಅದೇ – |
| | **(ಅ) 5ನೇ ಐದನೇ ಆರೋಪದ ಬಗ್ಗೆ ಸಾಕ್ಷಧಾರಗಳ ವಿಶ್ಲೇಷಣೆ:** (i) ಪಾರದರ್ಶಕತೆ ಅಧಿನಿಯಮ 2002ನ್ನು ಪಾಲಿಸಲಾಗಿದೆ. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ 4ನೇ ಪ್ರಕರಣದ (ಇ) ಖಂಡದ ಅನ್ವಯ ಒಂದು ಲಕ್ಷ ರೂಪಾಯಿಗಳಿಗೆ ಮೀರದ ಸರಕನ್ನು ಖರೀದಿಸುವಲ್ಲಿ ಪಾರದರ್ಶಕತೆ ಅಧಿನಿಯಮದ ಉಪಬಂಧಗಳು ಅನ್ವಯವಾಗುವುದಿಲ್ಲ ಎಂಬುದಾಗಿ ಕಲ್ಪಿಸಲಾಗಿದೆ. ದಿ: 30.3.02 ರಂದು ಆರ್ಥಿಕ ಇಲಾಖೆಯಿಂದ 2001–2002ನೇ ಸಾಲಿನಲ್ಲಿ ಔಷಧಿ ಖರೀದಿಗಾಗಿ ಅನುಮತಿ ನೀಡಲಾಗಿದೆ. ಆದ್ದರಿಂದ ಖರೀದಿಯನ್ನು ದಿ: 31.3.02 ರೊಳಗೆ ಪೂರೈಸಬೇಕಾಗಿದ್ದು, ಾರದರ್ಶಕತೆ ಅಧಿನಿಯಮದ ಉಲ್ಲಂಘನೆ ಆಗದಂತೆ ಒಂದು ಲಕ್ಷಕ್ಕೆ ಮೀರದಂತೆ ಖರೀದಿ ಆದೇಶಗಳನ್ನು ಹೊರಡಿಸುವುದು ಅನಿವಾರ್ಯವಾಗಿತ್ತು. ಈ ರೀತಿಖರೀದಿ ಆದೇಶಗಳನ್ನು ವಿಂಗಡಿಸಬಾರದು ಎಂಬುದಾಗಿಯಾವುದೇ ಉಪಬಂಧವಿರುವುದಿಲ್ಲ. ಎಲ್ಲಾ ಜಿಲ್ಲಾ ಪಂಚಾಯತಿಗಳಲ್ಲಿ ಇದೇ ಕ್ರಮಗಳನ್ನು ಅನುಸರಿಸಲಾಗುತ್ತಿದೆ. | |
| | (ii) ಕಛೇರಿಯ ಪತ್ರಾಂಕಿತ ಸಹಾಯಕರು ಮಂಡಿಸಿರುವ ಮಾಹಿತಿಗಳನ್ವಯ ಕ್ರಮ ಜರುಗಿಸಲಾಗಿದೆ. ಖರೀದಿ ಮುಂತಾದ ವಿಷಯಗಳಲ್ಲಿ ಕಛೇರಿಯ ಸಿಬ್ಬಂದಿಯಾದ ಬಡ್ಜೆಟ್ ಸಹಾಯಕರು, ಉಗ್ರಾಣ ಸಹಾಯಕರು ಹಾಗೂ ಕಛೇರಿಯ ಪತ್ರಾಂಕಿತ ಸಹಾಯಕರು ಈ ಬಗ್ಗೆ ವ್ಯತಿರಿಕ್ತ ಟಿಪ್ಪಣಿಗಳನ್ನು ಮಂಡಿಸಿರುವುದಿಲ್ಲ. ಆದ್ದರಿಂದ 3ನೇಆಪಾದಿತ ಅಧಿಕಾರಿಯು ಯಾವುದೇ ದುರ್ನಡತೆ ಎಸಗಿರುವುದಿಲ್ಲ. | |
| | **(iii) ಸಾಕ್ಷಿಯ ಹೇಳಿಕೆ:** 5ನೇ ಆರೋಪದ ಬಗ್ಗೆ ಶಿಸ್ತು ಪ್ರಾಧಿಕಾರಿಯ ಪರ ಸಾಕ್ಷಿದಾರರಾದ ಡಾ: ಜೆ.ಎನ್.ರಾಜು ಇವರು ತಮ್ಮ ಸಾಕ್ಷಿ | |

| | | |
|---|---|---|
| | ಹೇಳಿಕೆಯಲ್ಲಿ ಒಟ್ಟು ಬಿಲ್ಲುಗಳನ್ನು ತಮ್ಮ ಅಧಿಕಾರಿ ವ್ಯಾಪ್ತಿಯಲ್ಲಿ ಬರುವಂತೆ ವಿಭಜಿಸಿ ಆದೇಶ ಕೊಟ್ಟಿದ್ದಾರೆ ಎಂಬುದಾಗಿ ಮಾತ್ರ ಸಾಕ್ಷಿ ನುಡಿದಿದ್ದಾರೆ. ಆದರೆ 2ನೇ ಆಪಾದಿತರು ಕರ್ನಾಟಕ ಪಾರದರ್ಶಕತೆ ಅಧಿನಿಯಮದ ಉಪಬಂಧಗಳನ್ನು ಉಲ್ಲಂಘಿಸಿದ್ದಾರೆ ಎಂದು ಸಾಕ್ಷಿ ನುಡಿದಿರುವುದಿಲ್ಲ. | |
| | **5ನೇ ಐದನೇ ಆರೋಪದ ಬಗ್ಗೆ 3ನೇ ಆಪಾದಿತರ ಸಮರ್ಥನೆ:** ಆರೋಗ್ಯ ಮತ್ತು ಶಿಕ್ಷಣ ಉಪ ಸಮಿತಿ ಜಿಲ್ಲಾ ಪಂಚಾಯತ್ ಬೀದರ್ ತಮ್ಮ ನಡವಳಿಕೆಯಲ್ಲಿ ದಿ: 25.2.02 ರಲ್ಲಿ ಟೆಂಡರ್ ಎಂಬ ಶಬ್ದ ನಮೂದಿಸಿರುವುದಿಲ್ಲ. ಪಾರದರ್ಶಿಕೆ ಅಧಿನಿಯಮದಲ್ಲಿ ಪ್ರದತ್ತವಾದ ಅಧಿಕಾರ ಪ್ರಕಾರ ರೂ.1,00,000.00 ಒಳಗೆ ಪ್ರತ್ಯೇಕವಾಗಿ ಸರಬರಾಜು ಆದೇಶ ನೀಡಿರುತ್ತಾರೆ. ಉಪ ಸಮಿತಿಯ ನಿರ್ಧಾರವನ್ನು ಪ್ರಶ್ನೆ ಮಾಡಲು 3ನೇ ಆಪಾದಿತ ಅಧಿಕಾರಿಯವರಿಗೆ ಯಾವುದೇ ಅಧಿಕಾರವಿಲ್ಲವಾದ್ದರಿಂದ ಇದರಲ್ಲಿ ಅವರು ಯಾವುದೇ ತಪ್ಪು ಎಸಗಿರುವುದಿಲ್ಲ ಎಂದು ತಿಳಿಸಿದೆ. | |
| | 6. 6ನೇ ಆರನೇ ಆರೋಪದ ಬಗ್ಗೆ ಆರನೇ ಆರೋಪವು ಬೀದರ್ ಜಿಲ್ಲೆಯಿಂದ ಸುಮಾರು ಫರ್ಮ್‌ನಿಂದ ಒಂದೇ ದಿನದಲ್ಲಿ ಒಟ್ಟು ಮೊತ್ತದ ಸರಬರಾಜು ಪಡೆದು ಅದನ್ನು ಆ ದಿನದಂದೇ ದಾಸ್ತಾನುಗಳಿಗೆ ತೆಗೆದುಕೊಂಡಿದ್ದಿರಿ. ಇದು ಸಾಧಾರಣ ಪರಿಸ್ಥಿತಿಯಲ್ಲಿ ಸಾಧ್ಯವಾಗುವುದಿಲ್ಲ. ನಂತರ ಚೆಕ್‌ನನ್ನು ದಿ: 27.6.02 ರಲ್ಲಿ ಸಂಬಂಧಪಟ್ಟ ಸಂಸ್ಥೆಗೆ ಹಣ ಪಾವತಿಸಿದ್ದೀರಿ. | |
| | (ಅ) 6ನೇ ಆರನೇ ಆರೋಪದ ಬಗ್ಗೆ ಸಾಕ್ಷಾಧಾರಗಳ **ವಿಶ್ಲೇಷಣೆ:**<br>**(i) ಸಾಕ್ಷಿದಾರರ ಹೇಳಿಕೆ ಬಗ್ಗೆ:**<br>6ನೇ ಆರೋಪದ ಬಗ್ಗೆ ಶಿಸ್ತು ಪ್ರಾಧಿಕಾರಿಯ ಪರ ಸಾಕ್ಷಿದಾರರಾದ ಡಾ: ಜೆ.ಎನ್.ರಾಜು ರವರು ಮತ್ತು 600 ಕಿಲೋ ಮೀಟರ್ ಇದ್ದ ಸ್ಥಳದಿಂದ ಒಂದೇ ದಿವಸ ಇವುಗಳನ್ನು ಖರೀದಿಸಿದ್ದು ಎಂದು ಸಾಕ್ಷಿ ನುಡಿದಿದ್ದಾರೆ. 600 ಕಿಲೋ ಮೀಟರ್ ದೂರದಿಂದ ಒಂದೇ ದಿನದಲ್ಲಿ ಔಷಧಿಯನ್ನು ಖರೀದಿಸಿರುವುದು ದುರ್ನಡತೆ ಪದವ್ಯಾಪ್ತಿಯಲ್ಲಿ ಬರುವುದಿಲ್ಲ. ಬೆಂಗಳೂರಿನಲ್ಲಿರುವ ಸಂಸ್ಥೆಯು ಔಷಧಿಗಳನ್ನು ಬೀದರ್‌ನಲ್ಲಿ ದಾಸ್ತಾನು ನಿರ್ವಹಿಸಿ ಸರಬರಾಜು ಮಾಡಲು ಯಾವುದೇ ನಿರ್ಬಂಧವಿರುವುದಿಲ್ಲ. | – ಅದೇ – |
| | (ii) ದಾಸ್ತಾನು ವಹಿಗೆ ಅದೇ ದಿನ ತೆಗೆದು ಕೊಂಡಿರುವುದು ದುರ್ನಡತೆ ಆಗುವುದಿಲ್ಲ. ದಾಸ್ತಾನು ವಹಿಗೆ ಸರಬರಾಜಾದ ಔಷಧಿಗಳನ್ನು ಆಯಾ ದಿನದಂದೇ ತೆಗೆದುಕೊಳ್ಳಬೇಕಾಗಿದೆ. ದಾಸ್ತಾನು ವಹಿಯನ್ನು ವಿಚಾರಣಾ ವೇಳೆಯಲ್ಲಿ ಹಾಜರುಪಡಿಸಿ ಸಾಬೀತುಪಡಿಸಿರುವುದಿಲ್ಲ. ಸರಬರಾಜಾದ ಔಷಧಿಗಳನ್ನು ಅದೇ ದಿನ ದಾಸ್ತಾನಿಗೆ ತೆಗೆದುಕೊಂಡಿರುವುದು ದುರ್ನಡತೆಯ ಪದವ್ಯಾಪ್ತಿಯಲ್ಲಿ ಬರುವುದಿಲ್ಲ. | |
| | (iii) ಸಂಸ್ಥೆಗೆ ಹಣವನ್ನು ಪಾವತಿಸಿರುವುದು ದುರ್ನಡತೆಯ ಪದವ್ಯಾಪ್ತಿಯಲ್ಲಿ ಬರುವುದಿಲ್ಲ. ಖರೀದಿಸಿರುವ ಔಷಧವನ್ನು ದಾಸ್ತಾನಿಗೆ ತೆಗೆದುಕೊಂಡು, ಅವುಗಳನ್ನು ಖರೀದಿಯ | |

| | | |
|---|---|---|
| | ಉದ್ದೇಶಕ್ಕಾಗಿ ಬಳಸಲಾಗಿದೆ. ಹಾಗೂ ಆರ್ಥಿಕ ಇಲಾಖೆಯು ಸೂಚಿಸಿರುವಂತೆ 2001-02ನೇ ಸಾಲಿನ ಆಯವ್ಯಯದಲ್ಲಿ ಉಳಿತಾಯದ ಹಣದಿಂದ ಪಾವತಿ ಮಾಡಲಾಗಿದೆ. ಆದ್ದರಿಂದ ಯಾವುದೇ ದುರ್ನಡತೆ ಇರುವುದಿಲ್ಲ. | |
| | **6ನೇ ಆರೋಪದ ಬಗ್ಗೆ 3ನೇ ಆಪಾದಿತರ ಸಮರ್ಥನೆ:** 1ನೇ ಆಪಾದಿತ ಅಧಿಕಾರಿಗಳು ಆಡಳಿತಾತ್ಮಕ ಮಂಜೂರಾತಿ ಆದೇಶ ನೀಡಿದ ನಂತರ 2ನೇ ಆಪಾದಿತ ಅಧಿಕಾರಿಗಳು ದಿ: 30.3.02 ಹಾಗೂ 31.3.02 ರಂದು ಸರಬರಾಜು ಆದೇಶ ನೀಡಿರುತ್ತಾರೆ. ಈ ವಿಷಯದಲ್ಲಿ 3ನೇ ಆಪಾದಿತರು ದುರ್ನಡತೆ ಮಾಡಿರುವುದಿಲ್ಲ. ಮತ್ತು ಸಾಮಗ್ರಿಗಳು ಅದೇ ಸಾಯಂಕಾಲ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಾರ್ಯಾಲಯ ಬೀದರ್‌ಗೆ ಸರಬರಾಜು ಮಾಡಿರುತ್ತಾರೆ. ಇದರಂತೆ ಸಾಮಗ್ರಿಗಳ ದಾಸ್ತಾನು ತೆಗೆದುಕೊಳ್ಳಲಾಗಿದೆ. 2ನೇ ಆಪಾದಿತ ಅಧಿಕಾರಿಯವರ ಟಿಪ್ಪಣಿ ಅನುಸಾರ 1ನೇ ಆಪಾದಿತ ಅಧಿಕಾರಿಯವರು ಸಾಮಗ್ರಿಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಸರಬರಾಜುದಾರರಿಗೆ ಬಿಲ್ಲಿನ ಹಣ ಪಾವತಿಸಲು ಆದೇಶ ನೀಡಿರುತ್ತಾರೆ. ಈ ವಿಷಯದಲ್ಲಿ 3ನೇ ಆಪಾದಿತರು ದುರ್ನಡತೆ ಮಾಡಿರುವುದಿಲ್ಲ. | |
| | **7ನೇ ಏಳನೇ ಆರೋಪದ ಬಗ್ಗೆ:**<br>ಆಮ್‌ಕ್ರಲೈಟ್ ಬಯೋ ಅಡೇಸಿವ 0.5 ಎಂ.ಎಲ್. ರಾಸಾಯನ್ನಿಕಪಂಥ ಪದಾರ್ಥವು ಮಾರುಕಟ್ಟೆಯಲ್ಲಿ ಹಲವಾರು ಇದ್ದರೂ ದರಪಟ್ಟಿಯನ್ನು ಪಡೆಯದೇ ಒಂದೇ ಸಂಸ್ಥೆಯಿಂದ ಏಕ ಮೂಲದಿಂದ ಖರೀದಿಸಲು ಶಿಫಾರಸ್ಸು ಮಾಡಿರುತ್ತೀರಿ. ಇದೇ ರಾಸಾಯನಿಕವನ್ನು ಒಟ್ಟಾಗಿ ಖರೀದಿಸಿದಲ್ಲಿ ಇನ್ನೂ ಕಡಿಮೆ ದರದಲ್ಲಿ ಸಿಗುತ್ತಿತ್ತೆಂಬ ವಾಸ್ತವಾಂಶವನ್ನು ಮರೆಮಾಚಿ ದುರ್ನಡತೆ ಎಸಗಿದ್ದಿರಿ. | – ಅದೇ – |
| | **(ಅ) 7ನೇ ಆರೋಪದ ಬಗ್ಗೆ ಸಾಕ್ಷಾಧಾರಗಳ ವಿಶ್ಲೇಷಣೆ:**<br>(i) ತನಿಖಾ ವರದಿ ನಿಶಾನೆ ಪಿ-1ರ ಅನ್ವಯ ಮಾರುಕಟ್ಟೆಯಲ್ಲಿ ಹಲವಾರು ಪದಾರ್ಥಗಳು ಲಭ್ಯವಿರುವ ಬಗ್ಗೆ ಯಾವುದೇ ಮಾಹಿತಿ ಇಲ್ಲ. ನಿಶಾನೆ ಪಿ-1ರಲ್ಲಿ Amecrylate a bio adhesive ಬಗ್ಗೆ ಇತರೆ ಸಂಸ್ಥೆಗಳು ಹಾಗೂ ಅವುಗಳ ದರ ಪಟ್ಟಿಯ ವಿವರಗಳನ್ನು ನಮೂದಿಸಿರುವುದಿಲ್ಲ. ಆದ್ದರಿಂದ ಇದೇ ಪದಾರ್ಥವು ಮಾರುಕಟ್ಟೆಯಲ್ಲಿ ಹಲವಾರು ಲಭ್ಯವಿರುವುದು ಸಾಬೀತಾಗಿರುವುದಿಲ್ಲ. | |
| | (ii) M/s Shamchem Impex ಸಂಸ್ಥೆಯ ದರಗಳಲ್ಲಿ ಖರೀದಿಸಲಾಗಿದೆ. ಔಷಧಿಯ ತಯಾರಕರಾದ M/s Shamchem Impex, Bangalore, M/s Concord, Hyderabad ಇವರು ಔಷಧಿ ತಯಾರಿಕಾ ಸಂಸ್ಥೆ ಆಗಿದ್ದು, ಯಾವುದೇ ಹೆಚ್ಚುವರಿ ಕಮೀಷನ್ ಇಲ್ಲದೆ ಇದನ್ನು ಖರೀದಿಸಲಾಗಿದೆ. ಕಮೀಷನ್ ನೀಡದೆ ಹಣ ಉಳಿಸಲಾಗಿದೆ. | |
| | (iii) ದರಗಳ ಬಗ್ಗೆ ಚೌಕಾಶಿ ಮಾಡಿ ಖಾತರಿ ಪಡಿಸಿಕೊಳ್ಳಲಾಗಿದೆ. ದರಗಳ ಬಗ್ಗಗೆ ಸರಬರಾಜುದಾರರಾದ ಕೆ.ಎಸ್.ಐ.ಎಂ.ಸಿ. ಜೊತೆ ಸಮಾಲೋಚಿಸಿ ಯಾವುದೇ ಹೆಚ್ಚಿನ ಕಮೀಷನ್/ ಮೊತ್ತ/ ದರ ನೀಡದೆ ಖರೀದಿಸಲಾಗಿದೆ. | |

| | | |
|---|---|---|
| | 7ನೇ ಆರೋಪದ ಬಗ್ಗೆ 3ನೇ ಆಪಾದಿತ ಅಧಿಕಾರಿಯವರ ಸಮರ್ಥನೆ–2ನೇ ಆಪಾದಿತ ಅಧಿಕಾರಿಯವರು ಸ್ಪಷ್ಟ ಪ್ರಸ್ತಾವನೆಯಲ್ಲಿ ದರ ಹಾಗೂ ಕಂಪನಿಯ ಹೆಸರು ನಮೂದಿಸಲಾಗಿತ್ತು. ಇದರಂತೆ ಉಪ ಸಮಿತಿ ದಿನಾಂಕ: 25.2.02ರ ನಡವಳಿಕೆಯಲ್ಲಿ ಅನುಮೋದನೆ ನೀಡಿರುತ್ತಾರೆ. ಇದರ ಪ್ರಕಾರ 2ನೇ ಆಪಾದಿತ ಅಧಿಕಾರಿಗಳು ಕ್ರಮ ಕೈಕೊಂಡಿದ್ದಾರೆ. ಆದ್ದರಿಂದ ಇನ್ನು ಕಡಿಮೆ ದರದಲ್ಲಿ ಸಿಗುತ್ತದೆ ಎಂಬ ವಾಸ್ತವಾಂಶವನ್ನು ಮರೆ ಮಾಚುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. | |
| | 8ನೇ ಆರೋಪದ ಬಗ್ಗೆ: ಎಂಟನೇ ಆರೋಪವು ಮೇಸರ್ಸ್ ಕರ್ನಾಟಕ ಸ್ಟೇಟ್ ಇಂಡಸ್ಟ್ರಿಯಲ್ ಸೊಸೈಟಿ ಮತ್ತು ಮಾರ್ಕೆಟಿಂಗ್ ಕೋ–ಅಪರೇಟಿವ್ ಬೆಂಗಳೂರು ಸಂಸ್ಥೆಯಿಂದ ಯಾವ ಪದಾರ್ಥವನ್ನು ಖರೀದಿಸಬಾರದೆಂಬ ಸರ್ಕಾರದ ಸುತ್ತೋಲೆಯನ್ನು ಪಾಲಿಸದೇ ಗುರುತರವಾದ ಕರ್ತವ್ಯ ಲೋಪ ಮಾಡಿರುತ್ತೀರಿ. | – ಅದೇ – |
| | **(ಅ) 8ನೇ ಆರೋಪದ ಬಗ್ಗೆ ಸಾಕ್ಷಾಧಾರಗಳು ವಿಶ್ಲೇಷಣೆ:** (i) ನಿಶಾನೆ ಪಿ–4 2ನೇ ಆಪಾದಿತ ಅಧಿಕಾರಿಯವರ ಕಛೇರಿಯಲ್ಲಿ ಸ್ವೀಕೃತವಾಗಿರುವುದಿಲ್ಲ. (ಎ) ನಿಶಾನೆ ಪಿ–4 ಸರ್ಕಾರದ ಸುತ್ತೋಲೆಯಾಗಿದ್ದು, ಇದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾಗಿರುವುದಿಲ್ಲ. | |
| | (ಬಿ) ನಿಶಾನೆ ಪಿ–4 ದಿನಾಂಕ: 21.3.2002 ಆಗಿದ್ದು, ಇದು ಖರೀದಿಯ ದಿನಾಂಕ ಅಂದರೆ ದಿನಾಂಕ: 31.3.2002 ರೊಳಗೆ ಬೀದರ ಜಿಲ್ಲೆಯ ಯಾವುದೇ ಛೇರಿಗಳಲ್ಲಿ ಸ್ವೀಕೃತವಾಗಿರುವ ಸಾಧ್ಯತೆ ಇರುವುದಿಲ್ಲ. | |
| | (ii) ನಿಶಾನೆ ಪಿ–4ರಲ್ಲಿ ಕೆ.ಎಸ್.ಐ.ಎಂ.ಸಿ. ಮುಖಾಂತರ ಖರೀದಿಸಬಾರದು ಎಂಬ ನಿರ್ಬಂಧ ವಿಧಿಸಲಾಗಿದೆ. ನಿಶಾನೆ ಪಿ–4ರ ಸುತ್ತೋಲೆಯಲ್ಲಿ ಕೆ.ಎಸ್.ಐ.ಎಂ.ಸಿ. ಮುಖಾಂತರ ಸರಕುಗಳನ್ನು ಖರೀದಿಸಬಾರದು ಎಂದು ತಿಳಿಸಲಾಗಿದೆ. ಅಂದರೆ ಈ ಸುತ್ತೋಲೆಯ ಪೂರ್ವದಲ್ಲಿ ವಿವಿಧ ಇಲಾಖೆಗಳು ಕೆ.ಎಸ್.ಐ.ಎಂ.ಸಿ.ಯ ಮುಖಾಂತರ ಖರೀದಿಸುತ್ತಿದ್ದವು ಎನ್ನುವುದು ಸಾಬೀತಾಗಿದೆ. ಸುತ್ತೋಲೆಯು 2ನೇ ಆಪಾದಿತ ಅಧಿಕಾರಿಯವರ ಕಛೇರಿಯಲ್ಲಿ ಸ್ವೀಕೃತವಾಗದೆ ಇರುವುದರಿಂದ ಸುತ್ತೋಲೆಯ ಸೂಚನೆಗಳ ಬಗ್ಗೆ ಅವರಿಗೆ ಮಾಹಿತಿ ಇರುವುದಿಲ್ಲ. | |
| | 8ನೇ ಆರೋಪದ ಬಗ್ಗೆ 3ನೇ ಆಪಾದಿತ ಅಧಿಕಾರಿಯವರ ಸಮರ್ಥನೆ. ಉಪಸಮಿತಿಯ ನಡವಳಿಕೆ ಹಾಗೂ ಜಿಲ್ಲಾ ಪಂಚಾಯತ್ ಅಧಿಕಾರಿಗಳ ಅನುಮೋದನೆಯಲ್ಲಿ ಸೂಚಿಸಿದ ಸಂಸ್ಥೆಯಿಂದ 2ನೇ ಆಪಾದಿತ ಅಧಿಕಾರಿಗಳು ಖರೀದಿಸಿರುತ್ತಾರೆ. ಈ ವಿಷಯದಲ್ಲಿ 3ನೇ ಆಪಾದಿತರು ಯಾವುದೇ ದುರ್ನಡತೆ ಮಾಡಿರುವುದಿಲ್ಲ. | |
| | **9ನೇ ಒಂಭತ್ತನೇ ಆರೋಪದ ಬಗ್ಗೆ:** ಒಂಭತ್ತನೇ ಆರೋಪವು ಕುಟುಂಬ ಕಲ್ಯಾಣ ಶಸ್ತ್ರ ಚಿಕಿತ್ಸೆಯ ನಂತರದ ವೈದ್ಯೋಪಚಾರದ ಪ್ರಕ್ರಿಯೆಯಲ್ಲಿ ಈ ಔಷಧಿಯಲ್ಲದ | |

| | | |
|---|---|---|
| | ರಾಸಾಯನಿಕವನ್ನು ಮೊದಲೇ ಪರೀಕ್ಷೆ ಮಾಡಿರುವುದಿಲ್ಲ ಹಾಗೂ ಭಾರತ ಸರ್ಕಾರದಿಂದ ಗೊತ್ತುಪಡಿಸಿದ ಔಷಧಿ ಪಟ್ಟಿಯಲ್ಲಿರುವುದಿಲ್ಲ ಎಂಬ ಅಂಶವನ್ನು ಮೇಲಧಿಕಾರಿಗಳ ಗಮನಕ್ಕೆ ತರದೆ ದುರ್ನಡತೆ ಎಸಗಿದ್ದಿರಿ. | – ಅದೇ – |
| | **(ಅ) ಒಂಭತ್ತನೇ ಆರೋಪದ ಬಗ್ಗೆ ಸಾಕ್ಷಾಧಾರಗಳ ವಿಶ್ಲೇಷಣೆ:** (i) ಪಟ್ಟಿಯಲ್ಲಿಲ್ಲದ ಔಷಧಿಯನ್ನು ಖರೀದಿಸಬಾರದೆಂದು ಯಾವುದೇ ನಿರ್ಬಂಧವಿಲ್ಲ. ನಿಶಾನೆ ಪಿ–5 ರಲ್ಲಿ ಕೇಂದ್ರ List of Drus under family welfare programme ಇದನ್ನು ಒದಗಿಸಲಾಗಿದೆ. ಸದರಿ ಪಟ್ಟಿಯಲ್ಲಿ ಆಂಟಿಬಯಾಟಿಕ್ಸ್‌ಗಳನ್ನು ಹೊರತುಪಡಿಸಿ ಉಳಿದವನ್ನು ಖರೀದಿಸಲೇಬೇಕಾಗಿದೆ. ಆದರೆ ಚಿಕಿತ್ಸೆಗೆ ಉಪಯುಕ್ತವಾಗಿರುವ ಇತರೆ ಔಷಧಿಗಳನ್ನು ಅದರಲ್ಲೂ ಹೊಸ ಸಂಶೋಧನೆಯ ಮೂಲಕ ಬಂದಿರುವ ಔಷಧಿಗಳನ್ನು ಖರೀದಸಬಾರದೆಂದು ನಿಷೇಧ ಇರುವುದಿಲ್ಲ. | |
| | (ii) ಖರೀದಿಯ ಬಗ್ಗೆ ಸಕ್ಷಮ ಪ್ರಾಧಿಕಾರದ ಅನುಮೋದನೆ ಇದೆ. ಖರೀದಿಯನ್ನು ಜಿಲ್ಲಾ ಪಂಚಾಯತಿಯ ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯು ಅನುಮೋದಿಸಿದ್ದು, 1ನೇ ಆಪಾದಿತರಾದ ಕಾರ್ಯನಿರ್ವಹಣಾಧಿಕಾರಿಗಳು ಆಡಳಿತಾತ್ಮಕ ಅನುಮೋದನೆ ನೀಡಿದ್ದಾರೆ. ಮುಖ್ಯ ಲೆಕ್ಕಾಧಿಕಾರಿಗಳು ಬಿಲ್ಲನ್ನು ಮೇಲು ರುಜು ಮಾಡಿದ್ದಾರೆ. ಆದ್ದರಿಂದ ಖರೀದಿಯು ನಿಯಮಾನುಸಾರ ಇದೆ. | |
| | **9ನೇ ಆರೋಪದ ಬಗ್ಗೆ 3ನೇ ಆಪಾದಿತ ಅಧಿಕಾರಿಯವರ ಸಮರ್ಥನೆ:** ಉಪಸಮಿತಿಯ ನಡವಳಿಕೆ ಹಾಗೂ ಜಿಲ್ಲಾ ಪಂಚಾಯತ್ ಅಧಿಕಾರಿಗಳ ಅನುಮೋದನೆಯಲ್ಲಿ ಸೂಚಿಸಿದ ಸಂಸ್ಥೆಯಿಂದ 2ನೇ ಆಪಾದಿತ ಅಧಿಕಾರಿಯವರು ಖರೀದಿಸಿರುತ್ತಾರೆ. ಈ ವಿಷಯದಲ್ಲಿ 3ನೇ ಆಪಾದಿತ ಅಧಿಕಾರಿಯು ಯಾವ ದುರ್ನಡತೆ ಮಾಡಿರುವುದಿಲ್ಲ. | |
| | **10. ಹತ್ತನೇ ಆರೋಪದ ಬಗ್ಗೆ:** ಹತ್ತನೇ ಆರೋಪವು ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್) ನಿರ್ದೇಶಕರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರಿಂದ ಪೂರ್ವಾನುಮತಿ ಪಡೆಯದೇ ಹಾಗೂ ಅವರಿಂದ ಪ್ರಚುರಪಡಿಸಿದ ಪಟ್ಟಿಯಲ್ಲಿಲ್ಲದ ಔಷಧಿಯಲ್ಲದ ರಾಸಾಯನಿಕವನ್ನು ಖರೀದಿಸಲು ಆದೇಶ ನೀಡಲು ಸಹಕರಿಸಿರುತ್ತೀರಿ. | – ಅದೇ – |
| | **(ಅ) ಹತ್ತನೇ ಆರೋಪದ ಬಗ್ಗೆ ಸಾಕ್ಷಾಧಾರಗಳ ವಿಶ್ಲೇಷಣೆ:** (i) 10ನೇ ಆರೋಪದ ಬಗ್ಗೆ ಸಾಕ್ಷಿಯು ಯಾವುದೇ ಹೇಳಿಕೆಯನ್ನು ನೀಡಿರುವುದಿಲ್ಲ. 10ನೇ ಆರೋಪದ ಬಗ್ಗೆ ಡಾ: ಜೆ.ಎನ್. ರಾಜು ಇವರು ಯಾವುದೇ ಸಾಕ್ಷಿಯನ್ನು ನುಡಿದಿರುವುದಿಲ್ಲ. ನಿಶಾನೆ ಪಿ–1 ತನಿಖಾ ವರದಿಯಲ್ಲಿ ಯೋಜನಾ ನಿರ್ದೇಶಕರಿಂದ ಅನುಮತಿ ಪಡೆದು ಔಷಧಿಯನ್ನು ಖರೀದಿಸಬೇಕಿತ್ತು ಎಂಬ ಬಗ್ಗೆ ನಮೂದು ಇಲ್ಲ. ಆದ್ದರಿಂದ 10ನೇ ಆರೋಪವು ಸಾಬೀತಾಗುವುದಿಲ್ಲ. | |

| | | |
|---|---|---|
| | **10ನೇ ಆರೋಪದ ಬಗ್ಗೆ 3ನೇ ಆಪಾದಿತ ಅಧಿಕಾರಿಯವರ ಸಮರ್ಥನೆ:** ಪಂಚಾಯತ್ ರಾಜ್ ಅಧಿನಿಯಮದ ಪ್ರಕಾರ ಆರೋಗ್ಯ ಮತ್ತು ಶಿಕ್ಷಣ ಉಪ ಸಮಿತಿ ಜಿಲ್ಲಾ ಪಂಚಾಯತ್ ಬೀದರ. ಖರೀದಿ ಪ್ರಕ್ರಿಯೆಯಲ್ಲಿ ಉಪ ಸಮಿತಿಗೆ ಪೂರ್ಣ ಅಧಿಕಾರ ಇರುವುದರಿಂದ 2ನೇ ಆಪಾದಿತ ಅಧಿಕಾರಿಯವರು ಸಮಿತಿಯ ಸಭೆ ದಿ: 25.2.02ರ ಮೇರೆಗೆ ಸ್ಪಷ್ಟ ಪ್ರಸ್ತಾವನೆ ದರ ಜೊತೆಗೆ ಕಂಪನಿ ಹೆಸರು ನಮೂದಿಸಿದರು ಜಿಲ್ಲಾ ಪಂಚಾಯತ್ ಅಧೀನದಲ್ಲಿ ಬರುವ ಕಛೇರಿಗಳು ತಮ್ಮ ಉಪ ಸಮಿತಿಗೆ ಮುಂದಿನ ಅನುಮೋದನೆ ಪಡೆಯಬೇಕಾಗುತ್ತದೆ. ಇದರಂತೆ ಪ್ರಸ್ತಾವನೆಯ ಮೇಲೆ ದೀರ್ಘ ಚರ್ಚೆ ನಡೆಸಿ ಅನುಮೋದನೆ ನೀಡಿದ್ದಾರೆ. ನಡವಳಿಕೆಯಲ್ಲಿ ತಪ್ಪುಗಳು ಎತ್ತಿತೋರಿಸುವ ಅಧಿಕಾರ 1ನೇ ಆಪಾದಿತ ಅಧಿಕಾರಿಯವರಿಗೆ ಪಂಚಾಯತ್ ರಾಜ್ ಅಧಿನಿಯಮ 197 ಪ್ರಕಾರ ಷರಾ 1ನೇ ಆಪಾದಿತ ಅಧಿಕಾರಿಯವರು ನೀಡಬೇಕಾಗುತ್ತದೆ. ಆದರೆ ಇಂತಹ ಯಾವುದೇ ಷರಾ ನೀಡಿರುವುದಿಲ್ಲ. ಈ ನಡವಳಿಕೆ ಅನುಸಾರ ಆಡಳಿತಾತ್ಮಕ ಮಂಜೂರಾತಿ ಆದೇಶ ನೀಡಿರುತ್ತಾರೆ. ಆರ್.ಸಿ.ಎಚ್. ಅಧಿಕಾರಿಗಳಿಂದ ಅನುಮತಿ ಪಡೆಯಬೇಕೆಂಬ ಯಾವುದೇ ಆದೇಶ ಜಿಲ್ಲಾ ಪಂಚಾಯತ್ ನಿಂದ ನೀಡಿರುವುದಿಲ್ಲ. ಆದುದರಿಂದ ಮೇಲೆ ಕಂಡಿಕೆ 1 ರಿಂದ 10 ಆರೋಪಗಳನ್ನು ಅಲ್ಲಗಳೆಯಲಾಗಿದೆ. | |
| | **11. ಎಲ್ಲಾ ಹತ್ತು ಆರೋಪಗಳ ಬಗ್ಗೆ:** (1) ಈ ಪ್ರಕರಣದಲ್ಲಿ ಜಿಲ್ಲಾ ಪಂಚಾಯತ್ ಸ್ಥಾಯಿ ಸಮಿತಿಯ ಅನುಮೋದನೆ ಮೇರೆಗೆ ಸರ್ಕಾರದ ಸಂಸ್ಥೆಯ ಮೂಲಕ ಔಷಧಿ ಖರೀದಿ ಮಾಡಲಾಗಿದ್ದು, ಔಷಧಿ ಸಂಪೂರ್ಣವಾಗಿ ಸರಬರಾಜು ಆದ ನಂತರ ಗುಣಮಟ್ಟ ಪರಿಶೀಲಿಸಿ ಹಣ ಪಾವತಿ ಮಾಡಿರುವ ಹಿನ್ನೆಲೆಯಲ್ಲಿ ಯಾವುದೇ ಹಣ ದುರುಪಯೋಗ ಮತ್ತು ವಂಚನೆಯಾಗಿಲ್ಲವೆಂದು ವಿಚಾರಣಾಧಿಕಾರಿಯವರ ಗಮನಕ್ಕೆ ತರಲಾಗಿದೆ. | – ಅದೇ – |
| | 12. ಖರೀದಿಯ ಬಗ್ಗೆ ಸರ್ಕಾರದ ಅನುಮತಿ ಇರುವುದರಿಂದ ಯಾವುದೇ ದುರ್ನಡತೆ ಆಗಿರುವುದಿಲ್ಲ. ನಿಶಾನೆ ಪಿ–3ರಲ್ಲಿ ಸರ್ಕಾರದ ಆರ್ಥಿಕ ಇಲಾಖೆಯ Amecrylate a bio adhesive ಇದನ್ನು ಖರೀದಿಸಲು ಹಾಗೂ ಇದರ ಸಂಬಂಧ ಹಣ ವಿನಿಯೋಗಿಸಲು ಅನುಮತಿ ನೀಡಿದೆ. ಈ ರೀತಿ ಸರ್ಕಾರವೇ ಅನುಮೋದನೆ ನೀಡಿರುವುದರಿಂದ ಮಾತ್ರ ಔಷಧಿಗಳನ್ನು ಖರೀದಿಸಲಾಗಿದೆ. ಸರ್ಕಾರವು ಅನುಮೋದನೆ ನೀಡದಿದ್ದಲ್ಲಿ ಔಷಧಿಯನ್ನು ಖರೀದಿಸುವ ಪ್ರಶ್ನೆ ಉದ್ಭವಿಸುತ್ತಿರಲಿಲ್ಲ. 2001–02ನೇ ಸಾಲಿನಲ್ಲಿ ಒದಗಿಸಿರುವ ಒಟ್ಟಾರೆ ಆಯವ್ಯಯ ಉಳಿತಾಯದಲ್ಲಿ ಖರೀದಿಸಲು ಅನುಮತಿ ನೀಡಿರುವುದರಿಂದ ದಿ: 31.3.02 ರೊಳಗೆ ಖರೀದಿಸುವುದು ಅನಿವಾರ್ಯವಾಗಿತ್ತು. ಆದ್ದರಿಂದ ಖರೀದಿಯಲ್ಲಿ ಯಾವುದೇ ದುರ್ನಡತೆಯಾಗಿರುವುದಿಲ್ಲ. | – ಅದೇ – |
| | 13. ಸದ್ಭಾವನೆಯಿಂದ ತೆಗೆದುಕೊಂಡಿರುವ ಕ್ರಮಗಳು ದುರ್ನಡತೆ ಆಗುವುದಿಲ್ಲ. Amecrylate a bio adhesive | |

| | | |
|---|---|---|
| | ಇದನ್ನು ಖರೀದಿಸುವ ನಿರ್ಣಯವನ್ನು ಕುಟುಂಬ ಯೋಜನಾ ಕ್ರಮಗಳನ್ನು ಅನುಸರಿಸುವ ಫಲಾನುಭವಿಗಳ ಆರೋಗ್ಯದ ದೃಷ್ಟಿಯಿಂದ ಜಿಲ್ಲಾ ಪಂಚಾಯತ್ ತೆಗೆದುಕೊಂಡಿದೆ. ಈ ಕ್ರಮಗಳಿಂದ ಸಾರ್ವಜನಿಕರಿಗೆ ಉಪಯೋಗವಾಗಿದೆ. ಅಧಿಕಾರಿಗಳು ಈ ಔಷಧಿಯನ್ನು ಖರೀದಿಸಿ ಹಣ ಪಾವತಿ ಮಾಡಿರುವುದು ಸಾಬೀತಾಗಿದೆ. ಸದ್ಭಾವನೆಯಿಂದ ತೆಗೆದುಕೊಂಡ ಕ್ರಮಗಳಿಗೆ ರಕ್ಷಣೆ ಇರುವುದರಿಂದ ಇದರಲ್ಲಿ ನ್ಯೂನ್ಯತೆಗಳಿದ್ದಲ್ಲಿ ಇದನ್ನು ಆಡಿಟ್ ಆಕ್ಷೇಪಣೆಯ ಮಾದರಿಯಲ್ಲಿ ಪರಿಗಣಿಸಿ ಮುಕ್ತಾಯಗೊಳಿಸಬಹುದಾಗಿದೆ. | – ಅದೇ – |
| | 14. 3ನೇ ಆಪಾದಿತ ಅಧಿಕಾರಿಯವರು ಪತ್ರಾಂಕಿತ ಸಹಾಯಕರಾಗಿರುವುದರಿಂದ 2ನೇ ಆಪಾದಿತರ ನಿರ್ದೇಶನದಲ್ಲಿ ಕರ್ತವ್ಯ ನಿರ್ವಹಿಸಿರುತ್ತಾರೆ. 3ನೇ ಆಪಾದಿತರು ಪತ್ರಾಂಕಿತ ಸಹಾಯಕರಾಗಿದ್ದು, ವಿಚಾರಣೆಯಲ್ಲಿ ದಾಖಲಾಗಿರುವ ನಿಶಾನೆ ಪಿ–2ರ ಕಡತವು ಖರೀದಿಗಾಗಿ ಅನುಮೋದನೆ ದೊರೆತ ನಂತರ ಅವರಿಗೆ ಸ್ವೀಕೃತವಾಗಿದೆ. ಖರೀದಿಯ ಬಗ್ಗೆ ಅವರು ಯಾವುದೇ ಪ್ರಸ್ತಾಪವನ್ನು ಮಂಡಿಸಿರುವುದಿಲ್ಲ. ಔಷಧಿ ಖರೀದಿಯ ವಿಷಯವು ತಾಂತ್ರಿಕ ವಿಷಯವಾಗಿರುವುದರಿಂದ ಇದರಲ್ಲಿ ಅವರ ಪಾತ್ರ ಇರುವುದಿಲ್ಲ. ಎಲ್ಲಾ 10 ಆರೋಪಗಳನ್ನು ಏಕ ರೂಪವಾಗಿ ಮಾಡಿದ್ದು, ಅವರವರ ಕಾರ್ಯ ಹಂಚಿಕೆಗೆ ಅನುಗುಣವಾಗಿ ಮಾಡಿರುವುದಿಲ್ಲ. ತನಿಖಾ ವರದಿ ನಿಶಾನೆ ಪಿ–1ರಲ್ಲಿ 3ನೇ ಆಪಾದಿತರ ಬಗ್ಗೆ ಪ್ರತ್ಯೇಕ ಆರೋಪಗಳಿರುವುದಿಲ್ಲ. ಕೇವಲ ಇವರು ಸಂಬಂಧಪಟ್ಟ ಕಡತದಲ್ಲಿ ಸಹಿ ಮಾಡಿರುತ್ತಾರೆ ಎಂದು ಮಾತ್ರ ನಮೂದಿಸಲಾಗಿದೆ. ಖರೀದಿಯ ಆದೇಶಗಳನ್ನು ಆಡಳಿತಾತ್ಮಕ ಮಂಜೂರಾತಿ ಇರುವುದರಿಂದ 2ನೇ ಆಪಾದಿತ ಅಧಿಕಾರಿಯವರಿಗೆ ಒಪ್ಪಿಸುವಾಗ ಮಾತ್ರ ತಮ್ಮ ಸಹಿ ಮಾಡಿರುತ್ತಾರೆ^. | – ಅದೇ – |
| 5 | ಆಪಾದಿತರು ತಮ್ಮ ಲಿಖಿತ ವಾದದಲ್ಲಿ ^ಖರೀದಿಯ ಬಗ್ಗೆ ಸರ್ಕಾರದ ಅನುಮತಿ ಇರುವುದರಿಂದ ಯಾವುದೇ ದುರ್ನಡತೆ ಆಗಿರುವುದಿಲ್ಲ. ನಿಶಾನೆ ಪಿ–3ರಲ್ಲಿ ಸರ್ಕಾರದ ಆರ್ಥಿಕ ಇಲಾಖೆಯು Amecrylate a bio adhesive ಇದನ್ನು ಖರೀದಿಸಲು ಹಾಗೂ ಇದರ ಸಂಬಂಧ ಹಣ ವಿನಿಯೋಗಿಸಲು ಅನುಮತಿ ನೀಡಿದೆ. ಈ ರೀತಿ ಸರ್ಕಾರವೇ ಅನುಮೋದನೆ ನೀಡಿರುವುದರಿಂದ ಮಾತ್ರ ಔಷಧಿಗಳನ್ನು ಖರೀದಿಸಲಾಗಿದೆ. ಸರ್ಕಾರವು ಅನುಮೋದನೆ ನೀಡದಿದ್ದಲ್ಲಿ ಔಷಧಿಯನ್ನು ಖರೀದಿಸುವ ಪ್ರಶ್ನೆ ಉದ್ಭವಿಸುತ್ತಿರಲಿಲ್ಲ. 2001–02ನೇ ಸಾಲಿನಲ್ಲಿ ಒದಗಿಸಿರುವ ಒಟ್ಟಾರೆ ಆಯವ್ಯಯ ಉಳಿತಾಯದಲ್ಲಿ ಖರೀದಿಸಲು ಅನುಮತಿ ನೀಡಿರುವುದರಿಂದ ದಿ: 31.3.02 ರೊಳಗೆ ಖರೀದಿಸುವುದು ಅನಿವಾರ್ಯವಾಗಿತ್ತು. ಆದ್ದರಿಂದ ಖರೀದಿಯಲ್ಲಿ ಯಾವುದೇ ದುರ್ನಡತೆಯಾಗಿರುವುದಿಲ್ಲ^ ಎಂದು ತಿಳಿಸಿರುತ್ತಾರೆ. ವಿಚಾರಣ ವರದಿಯಲ್ಲಿ ಈ ಅಂಶದ ಬಗ್ಗೆ ನಮೂದು, ವಿಶ್ಲೇಷಣೆ ಹಾಗೂ ನಿರ್ಣಯಗಳು ದಾಖಲಾಗಿರುವುದಿಲ್ಲ. ಈ ಅಂಶವನ್ನು ಅಪೀಲು ಪ್ರಾಧಿಕಾರಿಯು ಪರಿಗಣಿಸಲು ಕೋರಿದೆ. | The argument of the Applellant is not correct. Prividing Budget grants for a specific purpose is not a blanket approval to use the funds in violation of the Rules and procedures. |

| | | |
|---|---|---|
| 6 | ವಿಧಿಸಿರುವ ದಂಡನೆಗಳ ಬಗ್ಗೆ:<br>Amecrylate a bio adhesive ಇದನ್ನು ಆಪಾದಿತರು ತಮ್ಮ ಉಪಯೋಗಕ್ಕಾಗಿ ಬಳಸಿರುವುದಿಲ್ಲ. ಸಾರ್ವಜನಿಕರಿಗೆ ಇದನ್ನು ಬಳಸಿ ಸಾರ್ವಜನಿಕರು ಇದರ ಲಾಭವನ್ನು ಪಡೆದಿದ್ದಾರೆ. ಸದರಿ ಖರೀದಿಯ ಬಗ್ಗೆ ಜಿಲ್ಲಾ ಪಂಚಾಯತಿಯ ಶಿಕ್ಷಣ ಮತ್ತು ಆರೋಗ್ಯ ಸ್ಥಾಯಿ ಸಮಿತಿಯ ಅನುಮೋದನೆಯೊಂದಿಗೆ ಹಾಗೂ ಆರ್ಥಿಕ ಇಲಾಖೆಯ ಅನುಮೋದನೆಯೊಂದಿಗೆ ಖರೀದಿಸಿದ್ದು, ಸದರಿ ಖರೀದಿಯ ಬಗ್ಗೆ ತಾಲ್ಲೂಕು ವೈದಾಧಿಕಾರಿಗಳು ಹಾಗೂ ಇತರೆ ವೈದ್ಯಾಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆ. ಖರೀದಿಸಿರುವ Amecrylate a bio adhesive ಇದು ವ್ಯರ್ಥವಾಗಿರುವುದಿಲ್ಲ. ಆದ್ದರಿಂದ ಸದರಿ ಖರೀದಿಯ ಬಗ್ಗೆ ನಿಯಮಗಳ ಪಾಲನೆಯಾಗಿಲ್ಲವೆಂಬ ಕಾರಣಕ್ಕಾಗಿ ಖರೀದಿ ಮಾಡಿರುವ Amecrylate a bio adhesive ಇದರ ಮೊಬಲಗನ್ನು ಅಪೀಲುದಾರರಿಂದ ವಸೂಲು ಮಾಡುವುದು ನಿಯಮಬಾಹಿರವಾಗಿದೆ. ಈ ರೀತಿ ವಸೂಲು ಮಾಡುವ ಮನಸ್ಸು ಕಾನೂನು ಬಾಹಿರವಾಗಿದೆ. ಔಷಧಿಯನ್ನು ಹಿಂತಿರುಗಿಸದ ಕಾರಣ ಆರೋಪವು ಸಾಬೀತಾಗಿಲ್ಲ. ಔಷಧಿಯ ಉಪಯೋಗವು ಸರ್ಕಾರ ಹೊಂದಿರುತ್ತಾರೆ. ಮತ್ತು ಮುಂದಾಗಿ ನಮ್ಮಿಂದ ಹಣ ವಸೂಲು ಮಾಡಿ ಇನ್ನೊಂದು ಉಪಯೋಗವು ಪಡೆಯಲಾಗುತ್ತಿದೆ. ಇದು ಕಾನೂನು ಬಾಹಿರವಾಗಿದೆ. ಮಾಡಿದಲ್ಲಿ ಸದರಿ ಔಷಧಿಯನ್ನು ಅಪೀಲುದಾರರಿಗೆ ಹಿಂತಿರುಗಿಸಬೇಕಾಗಿದೆ. ಆದ್ದರಿಂದ ವಿಧಿಸಿರುವ ದಂಡನೆಯು ಸಾಬೀತಾಗಿದೆ ಎಂದು ಹೇಳಲಾದ ದುರ್ನಡತೆಗೆ ವ್ಯತಿರಿಕ್ತವಾಗಿದೆ. | The Appellant argues that the decision of the Disciplinary authority to impose penalty of recovery of loss is not correct since the Government has utilized the drugs. Further he states that after recovery of loss from him such drugs should have been returned to Appellant and that the penalty imposed on him is disproportionate.<br><br>His argument cannot be considered for the reason that such an action would have resulted in leaving the AGO going scot free which, however has no provision under rules. By this argument he indirectly admits his guilt. |
| 7 | ಖರೀದಿಯಲ್ಲಿ ನಿಯಮಗಳ ಭಾಗಶಃ ಪಾಲನೆಯು ದುರ್ನಡತೆ ಪದವ್ಯಾಪ್ತಿಯಲ್ಲಿ ಬರುವುದಿಲ್ಲ. ಪ್ರಸ್ತುತ ಪ್ರಕರಣದಲ್ಲಿ ಬೀದರ್ ಜಿಲ್ಲಾ ಪಂಚಾಯಿತಿಯ ಶಿಕ್ಷಣ ಮತ್ತು ಸ್ಥಾಯಿ ಸಮಿತಿಯ ಅನುಮೋದನೆ ಹಾಗೂ ಆರ್ಥಿಕ ಇಲಾಖೆಯಿಂದ ಅನುಮೋದನೆ ಪಡೆದು Amecrylate a bio adhesive ಇದನ್ನು ಖರೀದಿಸಲಾಗಿದೆ. ಸದರಿ ಖರೀದಿಯಲ್ಲಿ ಭಾಗಶಃ ನಿಯಮಗಳ ಉಲ್ಲಂಘನೆಯಾಗಿರುವುದಾಗಿ ಆಪಾದಿಸಲಾಗಿದೆ. ಇದು ದುರ್ನಡತೆಯ ಪದವ್ಯಾಪ್ತಿಯಲ್ಲಿ ಬರುವುದಿಲ್ಲ. ದುರ್ನಡತೆಗೆ ಪದವನ್ನು ನ್ಯಾಯಾಲಯವು ಈ ಕೆಳಗೆ ನಮೂದಿಸಿರುವಂತೆ ಅರ್ಥೈಸಿದೆ. | The Appellant argues that the partial violation of Rules cannot be considered as mis-conduct and cites the case laws which cannot be considered in this context. He also pleads that great injustice has been done to him by not paying full salary for the period of suspension. Since the Enquiry has proved the Appellant guilty of charges leveled against him the full salary for the suspension period cannot be paid under the Rules. In fact the Appellant having found guilty had enjoyed the wages in the form of Subsistence allowance to the extent of 50% as permissible under Rules. His further arguments that the Enquiry officer has considered some irrelevant witnesses which is |

| | | |
|---|---|---|
| | | not in accordance with Indian Evidence Act cannot be considered for the reason that the Departmental proceedings cannot be on par with the judicial proceedings as they are quasi judicial proceedings. Therefore his argument that he has suffered financial loss and retrograde in incremental wages etc, cannot be considered. All these arguments have no basis and no justification is established. |
| | The word misconduct has been considered by the Supreme Court in State of Punjab and others V.Ram Singh, Ex-Constable, AIR 1992 SC 2188 (At page 2191 in para 5) | |
| | 5. Thus it could be seen that the word misconduct though not capable of precise definition, on reflection receives its connotation from the context, the delinquency in its performance and its effect on the discipline and the nature of the duty. It may involve moral turpitude, it must be improper or wrong behaviour, unlawful behaviour, willful in character forbidden act, a transgression of established and definite rule of action or code of conduct but not mere error of judgement, carelessness or negligence in performance of the duty, the act complained of bears forbidden quality or character. Its ambit has to be construed with reference to the subject matter and the context wherein the term occurs, regard being had to be scope of the statute and the public purpose it seeks to serve." | |
| | In continuation of the above I humbly submit that there is an obivious violation of law in not communicating the order to me. Under article 28 A part VII of C.A.A. Rules 1957 every order that is passed shall be communicated to the deliquent party. Since the present order disentitling me from the major portion of pension is not communicated to me I am put to great loss and prejudice is caused to me. Similarly the opinion order bearing No.CASC 18 CNS 05 dt: 11.5.06 passed by the public service commission is not communicated to me. Which is mentioned in G.O.No.SIASu. E74 SEN 2002 Dated: 23.1.06. At ref. Sl.No.9. This is a violation of Article | |

| | | |
|---|---|---|
| | 28 (C) part VII of CCA Rules 1957. Therefore his excellency, your Highness can interfere and reverse the order passed by the lower authority. | |
| | The deliquent No.3 was kept under suspension from 22.7.02 to 21.1.03 by the Director of health Services Bangalore. During this suspension period the deliquent No.3 was paid subsistence allowance of around 50% of the total salary. I was reinstated on 21.1.03. The amount due during the suspension period is not paid to me being rest of the salary. This amount is still lying unpaid to me and again. I am being put to harship by the present recovery. | |
| | During the suspension period I was due for annual grade increment at the rate of Rs. 260.00 per month plus the admissible D.A. this is not yet paid to me. This increment benefit is not included in my pension benefits. | |
| | In this way I have been put to great monetary loss. Triple punishment i.e., loss of increment, reducing, of pension and order of recovery. The break up figure of the calculation is as under 313666.67x6=18.82 Rs. 1000/- is ordered to be recovered from pension of deliquent 3 from 23.1.2007 for a period of 5 years. As pert AG's Bangalore calculation slip the detail come as under. | |
| | Reduced Pension DA<br>Rs. 2000/- Rs. 800/-<br><u>Amount of Recovery</u>:-<br>Suspention period is to be<br>Regularized from 22.7.02 to<br>21.1.2003 due salary<br>Due for annual Grade Increment<br>As on 1.1.03 @ Rate 260/- per<br>Month 260x1/2 130 pension + DA=234<br>Till the pension ceases to be paid or<br>Restoration of pension. | Total<br>Rs.1800x12x5=108000/-<br>313666.67<br><br><br>48000.00 |
| | Thus it is submitted that the amount to be deducted as per present A.G.slip is not in accordance with the order in question. | |
| | It is also illegal that the administration of Z.P. Bidar is let off even though they alone were responsible to pass the orders. | |
| | The Inquiry officer is his finding dated: 10.11.04 on page 8 part-II has stated that Dr.S.M.Jange and Dr.G.N.Raju have worked in Z.P.Bidar as planning officer during 2002. Dr. Raju has given the evidence even | |

| | | |
|---|---|---|
| | though he was not present in the office during the relevant period. His evedence is only a hearsay evidence. This is hit by the provisions of Indian evidance Act. Dr. Jange and Dr. G.N. Raju have not at all worked in Bidar Z.P. as planning officer so the finding of the inquiry officer is false. | |
| | The G.O. No.SIASu E 74 SEN 2002 dated: 23.1.2006 (it should be 2007) authorizes the alleged loss of Rs. 18.82 lakhs to be equally recovered from the pensionary benefits of Rs. 313666.67 Rs. 1000/- from pension for 5 years is an injustice to me. The last public service commission opinion is 11.5.2006 vide reference (9) of the G.O. Hece this should be 23.1.2007 instead of 23.1.2006. | |
| | The delequient No.3 has put in 34 years of service without any remark. He has rendered service to the Govt. for a long period and at no point of time any remark is made against him. This petitioner is a poor person. He has to meet many family expeces. The deduction made is highly brutal and unkind. | |

ಮೇಲ್ಕಂಡ ವಾಸ್ತವಾಂಶಗಳನ್ನೊಳಗೊಂಡ ಮೇಲ್ಮನವಿ ಹಾಗೂ ಶಿಸ್ತು ಪ್ರಾಧಿಕಾರದ ಪರಿಶೀಲನಾ ಟಿಪ್ಪಣಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 122 ಎಸ್ಇಎನ್ 2007, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2008.**

**ORDER**

I have considered the appeal petition submitted under Rule 18 of KCS (CCA) Rules, 1957 by Sri Syed Sattar, Retired Gazetted Assistant Office of the District Health and Family Welfare Department, Bidar against the order dated: 23.1.2007 of Government imposing the penalty of recovery or Rs. 3,13,666.67 and reducing the pension by Rs. 1,000/- for a period of five years, in the light of the contentions made in the appeal petition and the connected enquiry and appeal records.

Financial impropriety is conclusively established in the instant case. Cabinet has also considered and upheld the recommendation of the Karnataka Public Service Commission on the quantum of penalty. I, therefore dismiss the appeal petition and uphold the orders of Government as the Disciplinary Authority.

Sd/-
(Rameshwar Thakur)
Governor of Karnataka

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ,

ಪಿ.ಆರ್. 351

**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು-2).

**ವಿಷಯ:** ಶ್ರೀ ಎಂ. ಅಮರನಾಥ್ ಸುಮತಿ ನಿವೃತ್ತ ಕೆಎಎಸ್ ಅಧಿಕಾರಿ ಇವರ ವಿರುದ್ಧದ ಇಲಾಖಾ ವಿಚಾರಣೆ ಕುರಿತು ಪರಿಷ್ಕೃತದ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 03 ಎಸ್ಇಎನ್ 2000 ದಿನಾಂಕ 28-7-2006.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 03 ಎಸ್ಇಎನ್ 2000, ದಿನಾಂಕ 30-3-2007.
3. ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರ ಅ.ಸ. ಪತ್ರ ಸಂಖ್ಯೆ: ಸಿಸಿಎ/ ಮಿಸ್ 04/2006-07, ದಿನಾಂಕ 7-12-2007.

ಪ್ರಸ್ತಾವನೆ:

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಎಂ. ಅಮರನಾಥ್ ಸುಮತಿ, ಕೆಎಎಸ್ ಅಧಿಕಾರಿ ಇವರ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ ವಿಚಾರಣೆ ನಡೆಸಲು ಶ್ರೀ ಎ.ಎಸ್. ಶ್ರೀಕಾಂತ್, ಐಎಎಸ್ ಅಂದಿನ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ ಮೈಸೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೊಡಗು ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಈ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ನೇಮಿಸಲಾಗಿದ್ದ ಕೊಡಗು ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರ ಬದಲಾಗಿ ಉಪ ವಿಭಾಗಾಧಿಕಾರಿ, ಮಡಕೇರಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಈ ಹಿಂದೆ ಪ್ರಾದೇಶಿಕ ಆಯುಕ್ತರಾಗಿ ಸೇವೆ ಸಲ್ಲಿಸುತ್ತಿದ್ದ ಶ್ರೀ ಎ.ಎಸ್. ಶ್ರೀಕಾಂತ್, ಐಎಎಸ್ ಇವರು ವರ್ಗಾವಣೆಗೊಂಡಿರುವುದರಿಂದ ವಿಚಾರಣಾಧಿಕಾರಿಯ ನೇಮಕಾತಿಯಲ್ಲಿ ಕೇವಲ ಪದನಾಮ ಮಾತ್ರ ಸೂಚಿಸಿ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರನ್ನು, ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಪರಿಷ್ಕೃತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಪದನಾಮ ಮಾತ್ರ ಸೂಚಿಸಿ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರನ್ನು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲು ನಿರ್ಣಯಿಸಿದೆ. ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಎಸ್‌ಇಎನ್ 2000, (ಸಿಆಸುಇ 312 ಕೆಇವಿ 2007),**
**ಬೆಂಗಳೂರು ದಿನಾಂಕ 2ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ.ಎಸ್. ಶ್ರೀಕಾಂತ್, ಐಎಎಸ್ ಹಿಂದಿನ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರ ಬದಲಾಗಿ ಪದನಾಮ ಮಾತ್ರ ಸೂಚಿಸಿ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರನ್ನು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ವಿಚಾರಣಾಧಿಕಾರಿಗಳ ಮುಂದೆ ಪ್ರಕರಣವನ್ನು ಮಂಡಿಸುವ ಸಲುವಾಗಿ ನೇಮಿಸಲಾಗಿದ್ದ ಉಪ ವಿಭಾಗಾಧಿಕಾರಿ, ಮಡಿಕೇರಿ, ಕೊಡಗು ಜಿಲ್ಲೆ ಇವರ ಮಂಡನಾಧಿಕಾರಿಯಾಗಿ ಮುಂದುವರೆಯುತ್ತಾರೆ.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ,

ಪಿ.ಆರ್. 79

**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು–2).

**ಆರ್ಥಿಕ ಸಚಿವಾಲಯ**

**ವಿಷಯ:** ಶ್ರೀ ರುದ್ರಗೌಡ ಬಸನಗೌಡ ಪಾಟೀಲ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, (ಋಣ ನಿರ್ವಹಣೆ) –1, ಹುಬ್ಬಳ್ಳಿ, ಇವರ ವಿರುದ್ಧದ ಅಭಿಯೋಜನಾ ಆದೇಶದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ ಐಎನ್‌ವಿ(ಜಿ)/ ಎಲ್–15/ ಸಿಆರ್–7/ 2005/ ಬಿಜಿಎಂ/ ದಿನಾಂಕ: 13–9–2005.
2) ಸರ್ಕಾರಿ ಆದೇಶ ಸಂಖ್ಯೆ:ಆಇ 38 ವಾತೆತ 2005 ದಿನಾಂಕ: 21–11–2005
3) ಸರ್ಕಾರಿ ಆದೇಶ ಸಂಖ್ಯೆ:ಆಇ 38 ವಾತೆತ 2005 ದಿನಾಂಕ: 06–09–2006.
4) ತನಿಖಾ ದಾಖಲೆಗಳಾದ ಪ್ರಥಮ ತನಿಖಾ ವರದಿ/ ಶೋಧನಾ ಪಂಚನಾಮೆಗಳು, ಸಾಕ್ಷಿದಾರರ ಹೇಳಿಕೆಗಳು ಮತ್ತು ತನಿಖಾಧಿಕಾರಿಯ ಅಂತಿಮ ವರದಿಯ ಕಡತಗಳು.
5) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ:ಲೋಕ್/ ಐಎನ್‌ವಿ(ಜಿ)/ಎಲ್–15/ ಸಿಆರ್–7/2005/ಬಿಜಿಎಂ/ದಿನಾಂಕ: 27–8–2007

ಪ್ರಸ್ತಾವನೆ:

ಶ್ರೀ ರುದ್ರಗೌಡ ಬಸನಗೌಡ ಪಾಟೀಲ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು. ಪ್ರಸ್ತುತ ಋಣನಿರ್ವಹಣೆ–1, ಹುಬ್ಬಳ್ಳಿ, ಇವರು ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂದು ತಿಳಿದು ಬಂದ

ವಿಶ್ವಾಸಾರ್ಹ ಮಾಹಿತಿಯನ್ವಯ ಸದರಿ ಆರೋಪಿತರ ವಿರುದ್ಧ ಪೊಲೀಸ್ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಳಗಾವಿ, ಇವರು ದಿನಾಂಕ: 29–07–2005 ರಂದು ಲಂಚ ನಿರೋಧಕ ಕಾಯ್ದೆ 1988 ಕಲಂ 13(1)(ಇ) ಜೊತೆ 13(2)ರ ಪ್ರಕಾರ ಮೊಕದ್ದಮೆ ಸಂಖ್ಯೆ:7/2005ರಲ್ಲಿ ದಾಖಲಿಸಿರುವ ಪ್ರಕರಣದ ಮೇರೆಗೆ ಮೇಲೆ (1) ಮತ್ತು (4) ರಲ್ಲಿ ಓದಲಾದ ತನಿಖಾಧಿಕಾರಿಯ ವರದಿ ಮತ್ತು ತನಿಖಾ ದಾಖಲೆಗಳನ್ನು ಹೆಚ್ಚುವರಿ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ (5) ರಲ್ಲಿ ಓದಲಾದ ದಿನಾಂಕ:13–9–2005ರ ಪತ್ರದೊಂದಿಗೆ ಕಳುಹಿಸಿಕೊಟ್ಟು ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ:

1) ಪ್ರಥಮ ವರ್ತಮಾನದ ವರದಿ.

2) ಶೋಧನಾ ಪಂಚನಾಮೆಗಳು:

1) ಮನೆ ನಂ. ಸಿ.ಎಂ.ಸಿ. –2392/ಎ, ಹಾಗೂ ಅವರು ಕೆಲಸ ಮಾಡುತ್ತಿದ್ದ ಸಹಾಯಕ ಆಯುಕ್ತರವರ ಕಛೇರಿ, 2ನೇ ವೃತ್ತ, ಎಸ್.ವಿ. ಪಟ್ಟಣಶೆಟ್ಟಿ ಬಿಲ್ಡಿಂಗ್, ಅಶೋಕನಗರ, ನಿಪ್ಪಾಣಿ, ಇಲ್ಲಿ ದಿನಾಂಕ: 29–07–2005 ರಂದು ನಡೆಸಲಾದ ಶೋಧನಾ ಪಂಚನಾಮೆ.

2) ಸಹಾಯಕ ಆಯುಕ್ತರವರ ಕಛೇರಿ, 2ನೇ ವೃತ್ತ, ಎಸ್.ವಿ. ಪಟ್ಟಣಶೆಟ್ಟಿ ಬಿಲ್ಡಿಂಗ್, ಅಶೋಕನಗರ, ನಿಪ್ಪಾಣಿ, ಇಲ್ಲಿ ದಿನಾಂಕ:29–07–2005 ರಂದು ನಡೆಸಲಾದ ಶೋಧನಾ ಪಂಚನಾಮೆ.

ಶ್ರೀ ರುದ್ರಗೌಡ ಬಸನಗೌಡ ಪಾಟೀಲ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಇವರು ತಮ್ಮ ಬಲ್ಲ ಆದಾಯದ ಮೂಲಗಳಿಗಿಂತ ಹೆಚ್ಚಿನ ಪ್ರಮಾಣದ ಆಸ್ತಿಗಳನ್ನು ಹೊಂದಿರುವರೆಂದು ತಿಳಿದುಬಂದ ವಿಶ್ವಾಸಾರ್ಹ ಮಾಹಿತಿಯ ಮೇರೆಗೆ ಶ್ರೀ ಎಸ್.ಡಿ.ಬಾಗವಾಡಮಠ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಳಗಾವಿ, ಇವರು ಸದರಿಯವರ ವಿರುದ್ಧ ಮೊಕದ್ದಮೆಯನ್ನು ದಾಖಲೆ ಮಾಡಿ, ತನಿಖೆ ನಡೆಸಲು ಪೊಲೀಸ್ ಅಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಳಗಾವಿ, ಇವರಿಂದ ಆದೇಶ ಪಡೆದುಕೊಂಡು ದಿನಾಂಕ: 29–7–2005 ರಂದು ಮೊಕದ್ದಮೆ ಸಂಖ್ಯೆ:7/2005ರಲ್ಲಿ ಪ್ರಕರಣ ದಾಖಲಿಸಿಕೊಂಡು ಮಾನ್ಯ ಜಿಲ್ಲಾ ವಿಶೇಷ ಮತ್ತು ಸತ್ರ ನ್ಯಾಯಾಲಯ, ಬೆಳಗಾವಿ, ದಿ:29–7–2005 ರಂದು ಶೋಧನಾ ವಾರೆಂಟ್‌ನ್ನು ಪಡೆದುಕೊಂಡು ಸದರಿ ಅಧಿಕಾರಿಯವರ ವಾಸದ (1) ಮನೆ ನಂ.ಸಿ.ಎಂ.ಸಿ.–2392/ಎ, ಹಾಗೂ ಅವರು ಕೆಲಸ ಮಾಡುತ್ತಿದ್ದ ಸಹಾಯಕ ಆಯುಕ್ತರವರ ಕಛೇರಿ, 2ನೇ ವೃತ್ತ, ಎಸ್.ವಿ. ಪಟ್ಟಣಶೆಟ್ಟಿ ಬಿಲ್ಡಿಂಗ್, ಅಶೋಕನಗರ, ನಿಪ್ಪಾಣಿ, ಹಾಗೂ ಇವರು ಕರ್ತವ್ಯನಿರ್ವಹಿಸುತ್ತಿದ್ದ ಕಛೇರಿಯಾದ (2) ಸಹಾಯಕ ಆಯುಕ್ತರವರ ಕಛೇರಿ, 2ನೇ ವೃತ್ತ, ಎಸ್.ವಿ. ಪಟ್ಟಣಶೆಟ್ಟಿ ಬಿಲ್ಡಿಂಗ್, ಅಶೋಕನಗರ, ನಿಪ್ಪಾಣಿ, ಇಲ್ಲಿ ದಿನಾಂಕ:29–07–2005 ಈ ಸ್ಥಳಗಳನ್ನು ಇತರೇ ತನಿಖಾಧಿಕಾರಿಗಳು ಹಾಗೂ ಸಿಬ್ಬಂದಿಯ ಸಹಾಯದೊಂದಿಗೆ ಪಂಚ ಸಾಕ್ಷಿದಾರರ ಸಮಕ್ಷಮದಲ್ಲಿ ದಾಳಿ ನಡೆಸಿ, ಶೋಧನೆ ನಡೆಸಿರುತ್ತಾರೆ.

ಈ ಪ್ರಕರಣದಲ್ಲಿನ ತನಿಖಾಧಿಕಾರಿಯಾದ ಶ್ರೀ ಎಸ್.ಡಿ. ಬಾಗವಾಡಮಠ ಮತ್ತು ಎಸ್.ಎಮ್. ಶಿವಕುಮಾರ, ಪೊಲೀಸ್ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಳಗಾವಿ ಮತ್ತು ಗದಗ, ಇವರು ತನಿಖೆ ನಡೆಸಿ, ಅಂತಿಮ ತನಿಖಾ ವರದಿಯನ್ನು ನೀಡಿರುತ್ತಾರೆ. ತನಿಖೆಯ ಉದ್ದೇಶಕ್ಕಾಗಿ ಆಪಾದಿತರು ಸರ್ಕಾರಿ ಸೇವೆಗೆ ಸೇರಿದ ದಿನಾಂಕ: 1–7–91 ರಿಂದ ಶೋಧನಾ ದಾಳಿ ನಡೆಸಿದ ದಿನಾಂಕ: 29–7–2005 ರವರೆಗಿನ ಅವಧಿಗೆ ಚೆಕ್ ಅವಧಿ ಎಂದು ನಿಗಧಿಪಡಿಸಲಾಗಿದೆ. ತನಿಖೆಯು ಪೂರ್ಣಗೊಂಡ ನಂತರ ಆಪಾದಿತರ ವಶದಲ್ಲಿದ್ದ ಒಟ್ಟು ಆಸ್ತಿ ಆದಾಯದ ವಿವರಗಳು ಈ ಕೆಳಗಿನಂತೆ ಇರುವುದೆಂದು ತನಿಖಾಧಿಕಾರಿಯು ಅಂತಿಮ ವರದಿಯಲ್ಲಿ ತಿಳಿಸಿರುತ್ತಾರೆ.

**ಆಪಾದಿತರ ಮತ್ತು ಅವರ ಕುಟುಂಬದ ಸದಸ್ಯರ ಹೆಸರಿನಲ್ಲಿರುವ ಆಸ್ತಿಗಳ ಸಂಕ್ಷಿಪ್ತ ವಿವರಗಳು ಮತ್ತು ಮೌಲ್ಯದ ಪಟ್ಟಿ:**

| ಕ್ರ.ಸಂ. | ಆಸ್ತಿಗಳ ವಿವರಗಳು | ಮೌಲ್ಯ |
|---|---|---|
| 1) | ನಿಪ್ಪಾಣಿ ರಿ.ಸ.ನಂ.142 ಡಿ. ಪ್ಲಾಟ್ ನಂ.11 ಮತ್ತು 12 ಖರೀದಿಸಿದ ಬಗ್ಗೆ. | 1,18,500–00 |
| 2) | ನಿಪ್ಪಾಣಿ ರಿ.ಸ.ನಂ.142 ಡಿ. ಪ್ಲಾಟ್ ನಂ.11 ಮತ್ತು 12 ರಲ್ಲಿ ಕಟ್ಟಡ | 22,20,000–00 |
| 3) | 1) ನಿಪ್ಪಾಣಿ ರಿ.ಸ.ನಂ.162 ಕ. ಪ್ಲಾಟ್ ನಂ.3, 4 ಮತ್ತು 5 ಖರೀದಿಸಿದ ಬಗ್ಗೆ.<br>2) ಸದರಿ ರಿ.ಸ.ನಂ.ಪ್ಲಾಟ್ ನಂ.2 | 12,79,000–00<br>5,11,000–00 |
| 4) | ನಿಪ್ಪಾಣಿ ರಿ.ಸ.ನಂ.162 ಕ ಪ್ಲಾಟ್ ನಂ. 2,3,4 ಮತ್ತು 5 ರಲ್ಲಿ ನಿರ್ಮಿಸಿರುವ ಪ್ರಾಣಿ ಪಕ್ಷಿಗಳ ಕಟ್ಟಡ | 2,70,291–00 |
| 5) | ಗೃಹ ಉಪಯೋಗಿಸುವ ಸಾಮಾನುಗಳು, ಪೀಠೋಪಕರಣಗಳು, ಯುಟೆನ್‌ಸಿಲ್ಸ್ ಮತ್ತು ಇಲೆಕ್ಟ್ರಿಕಲ್ ವಸ್ತುಗಳು: | 17,02,337–00 |
| 6) | ಜಪಾನ ಲೈಫ್ ಮ್ಯಾಗನೇಟಿಕ್ | 1,00,000–00 |

| | | |
|---|---|---|
| 7) | ಬೆಳ್ಳಿ, ಬಂಗಾರದ ಆಭರಣಗಳು:<br>1) ಬಂಗಾರದ ಆಭರಣಗಳು<br>2) ಬೆಳ್ಳಿಯ ಆಭರಣಗಳು | <br>15,000–00<br>16,600–00 |
| 8) | ಇತರೆ ಠೇವಣಿ ಇಟ್ಟಿದ ಬಗ್ಗೆ.<br>1. ಅಡುಗೆ ಅನಿಲ ಕುರಿತು ಮೈತ್ರಾಣಿ ಏಜೆನ್ಸಿ, ನಿಪ್ಪಾಣಿ, ಠೇವಣಿ ಇಟ್ಟಿದ್ದು.<br>2. ಅಡುಗೆ ಅನಿಲ ಕುರಿತು ಮೆ:ಸ್ವಾಸ್ತಿಕ್ ಟ್ರೇಡರ್ಸ್ ನಿಪ್ಪಾಣಿ, ಠೇವಣಿ ಇಟ್ಟಿದ್ದು.<br>3. ಮನೆಗೆ ವಿದ್ಯುಚ್ಛಕ್ತಿ ಕುರಿತು ಹೇಸಕಾಂ ನಿಪ್ಪಾಣಿಯಲ್ಲಿ ಠೇವಣಿ ಇಟ್ಟಿದ್ದು.<br>4. ಆಪಾದಿತರು ತಮ್ಮ ಮನೆಗೆ ದೂರವಾಣಿ ಸೌಲಭ್ಯಕ್ಕಾಗಿ ಠೇವಣಿ ಇಟ್ಟಿದ್ದು. | <br>1,150–00<br>750–00<br>18,274–00<br>3,840–00 |
| 9) | ಮೋಟಾರು ವಾಹನ ಖರೀದಿಸಿದ ಬಗ್ಗೆ:<br>1. ಹಳೆಯ ಮಾರುತಿ ಜೆನ್ ಕಾರ್ ನಂ.ಜಿಎ 02 ಜೆ 0999 ಖರೀದಿಸಿದ ಬಗ್ಗೆ.<br>2. ಮಾರುತಿ ಜನ್ ಕಾರ್ ನಂ.ಕೆಎ 23 ಎಮ್‌ಸಿ 9 ಖರೀದಿಸಿದ ಬಗ್ಗೆ | <br>2,10,000–00<br>4,04,628–00 |
| 10) | ಮನೆ ಶೋಧನಾ ಕಾಲಕ್ಕೆ ದೊರೆತ ನಗದು ಹಣ | 5,394–00 |
| 11) | ಷೇರ್ಸ್‌ಗಳು ಖರೀದಿಸಿದ ಬಗ್ಗೆ:<br>1. ಶ್ರೀ ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಬೈಲಹೊಂಗಲ ರವರಿಂದ ತಮ್ಮ ಹಾಗೂ ತಮ್ಮ ಮಡದಿ ಹೆಸರಿನಲ್ಲಿ ಷೇರ್ಸ್ ಖರೀದಿಸಿದ ಬಗ್ಗೆ.<br>2. ಬೆಳಗಾವಿ ರಾಣಿ ಚೆನ್ನಮ್ಮಾ ಮಹಿಳಾ ಸಹಕಾರಿ ಬ್ಯಾಂಕ್ ನಿಯಮಿತ, ಬೆಳಗಾವಿ ರವರಿಂದ ತಮ್ಮ ಮಡದಿ ಹೆಸರಿನಲ್ಲಿ ಷೇರ್ಸ್ ಖರೀದಿಸಿದ ಬಗ್ಗೆ. | <br><br><br>4,000–00<br>1,000–00 |
| 12) | ವಿವಿಧ ಬ್ಯಾಂಕ್‌ಗಳಲ್ಲಿ ಉಳಿತಾಯ ಖಾತೆ ಹೊಂದಿದ ಬಗ್ಗೆ. | 1,98,344–00 |
| | ಒಟ್ಟು | 70,80,208–00 |

**ಖರ್ಚು ವೆಚ್ಚ ಅನುಬಂಧ-2**

| ಕ್ರ.ಸಂ. | ಆಸ್ತಿಯ ವಿವರಗಳು | ಮೌಲ್ಯ ರೂಪಾಯಿಗಳಲ್ಲಿ |
|---|---|---|
| 1) | ಕೌಟುಂಬಿಕ ವೆಚ್ಚ | 5,75,923–00 |
| 2) | ಇಲೆಕ್ಟ್ರಾನಿಕ್ಸ್ ವಸ್ತುಗಳು | 71,119–00 |
| 3) | ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಮಾಡಿರುವ ಖರ್ಚು | 92,710–00 |
| 4) | ಮನೋರಂಜನೆ ಕಾರ್ಯಕ್ರಮಕ್ಕೆ ಮಾಡಿರುವ ಖರ್ಚು | 43,002–00 |
| 5) | ಗೃಹ ಪ್ರವೇಶಕ್ಕಾಗಿ ಮಾಡಿರುವ ಖರ್ಚು | 1,98,800–00 |
| 6) | ವಿದ್ಯುತ್ ಉಪಯೋಗಿಸಿದಕ್ಕಾಗಿ ಸಂದಾಯ ಮಾಡಿರುವ ಬಿಲ್ಲು. | 1,07,409–00 |
| 7) | ದೂರವಾಣಿ ಉಪಯೋಗಿಸಿದಕ್ಕಾಗಿ ಸಂದಾಯ ಮಾಡಿರುವ ಬಿಲ್ಲು. | 53,234–00 |
| 8) | ವಿವಿಧ ಸ್ಥಳಗಳಲ್ಲಿ ಮನೆ ಬಾಡಿಗೆ ಸಂದಾಯ ಮಾಡಿದ ಬಗ್ಗೆ. | 63,500–00 |
| 9) | ಕೇಬಲ್ ಉಪಯೋಗಿಸಿದ್ದಕ್ಕಾಗಿ ಬಿಲ್ಲು ಸಂದಾಯ ಮಾಡಿದ ಬಗ್ಗೆ. | 18,000–00 |
| 10) | ನಿಪ್ಪಾಣಿಯ ರಿ.ಸ.ನಂ.162ಕ ಫ್ಲಾಟ್ ನಂ2,3,4 ಮತ್ತು 5 ರಲ್ಲಿ ಬೋರ್‌ವೆಲ್ ಹಾಕಿಸಿದ ಬಗ್ಗೆ. | 88,000–00 |
| 11) | ಗೋಲ್ಡನ್ ನರ್ಸರಿ ಬಗ್ಗೆ ಮಾಡಿರುವ ಖರ್ಚು | 68,310–00 |
| 12) | ಆಪಾದಿತರು ತಮ್ಮ ಮಡದಿ ಮತ್ತು ಮಕ್ಕಳ ಹೆಸರಿನಲ್ಲಿ ಜೀವವಿಮೆ ಮಾಡಿದ ಬಗ್ಗೆ. | 2,53,777–00 |
| 13) | ಮಾರುತಿ ಜೆನ್ ಕಾರ್ ನಂ.ಕೆಎ 23 ಎಮ್‌ಸಿ 9ನೇದ್ದಕ್ಕೆ ಇನ್ಸೂರನ್ಸ್ ಮಾಡಿದ ಬಗ್ಗೆ. | 22,064–00 |
| 14) | ಮಾರುತಿ ಜೆನ್ ಕಾರ್ ನಂ.ಕೆಎ 23 ಎಮ್‌ಸಿ 9ನೇದ್ದಕ್ಕೆ ಪಾವತಿಸಿರುವ ಜೀವಾವಧಿ ತೆರಿಗೆ ಬಗ್ಗೆ. | 38,690–00 |
| 15) | ಮಾರುತಿ ಜೆನ್ ಕಾರ್ ನಂ.ಕೆಎ 23 ಎಮ್‌ಸಿ 9ನೇದ್ದಕ್ಕೆ ಮಾಡಿರುವ ನಿರ್ವಹಣಾ ವೆಚ್ಚ | 11,382–00 |
| 16) | ಮಾರುತಿ ಜೆನ್ ಕಾರ್ ನಂ.ಕೆಎ 02 ಜೆ 0999 ನೇದ್ದಕ್ಕೆ ಪಾವತಿಸಿರುವ ಜೀವಾವಧಿ ತೆರಿಗೆ ಬಗ್ಗೆ. | 19,530–00 |

| | | |
|---|---|---|
| 17) | ಮಾರುತಿ ಜೆನ್ ಕಾರ್ ನಂ.ಕೆಎ 02 ಜೆ 0999 ನೇದ್ದಕ್ಕೆ ಮಾಡಿರುವ ನಿರ್ವಹಣಾ ವೆಚ್ಚ | 19,329–00 |
| 18) | ಮನೆ ಕಟ್ಟಲು ಪರವಾನಗಿಯ ಕುರಿತು ಪಾವತಿಸಿರುವ ಫೀ | 15,272–00 |
| 19) | ಮನೆ ಹಾಗೂ ನೀರಿನ ಕರ ಪಾವತಿಸಿದ ಬಗ್ಗೆ | 23,124–00 |
| 20) | **ಬ್ಯಾಂಕ್‌ದಿಂದ ಪಡೆದ ಸಾಲವನ್ನು ಬಡ್ಡಿ ಸಮೇತ ಮರುಪಾವತಿಸಿದ್ದು:**<br>1) ಭಾರತೀಯ ಸ್ಟೇಟ್ ಬ್ಯಾಂಕ್ ನಿಪ್ಪಾಣಿಗೆ ಬಡ್ಡಿ ಸಮೇತ ಸಾಲ ಮರುಪಾವತಿ ಮಾಡಿದ ಬಗ್ಗೆ. | 1,14,850–00 |
| | 2) ಓಂಗಣೇಶ ಅರ್ಬನ್ ಕೊ–ಅಪರೇಟಿವ್ ಕ್ರೆಡಿಟ್ ಸೊಸೈಟಿ ಲಿಮಿಟೆಡ್ ನಿಪ್ಪಾಣಿಗೆ ಬಡ್ಡಿ ಸಮೇತ ಸಾಲ ಮರುಪಾವತಿಸಿದ ಬಗ್ಗೆ. | 2,52,445–00 |
| | 3) ಶ್ರೀ ಬ್ರಹ್ಮನಾಥ ಕ್ರೆಡಿಟ್ ಸೌಹಾರ್ದ ಸಹಕಾರಿ ನಿಯಮಿತ ನಿಪ್ಪಾಣಿರವರಿಗೆ ಬಡ್ಡಿ ಸಮೇತ ಸಾಲ ಮರುಪಾವತಿಸಿದ ಬಗ್ಗೆ. | 3,33,234–00 |
| | 4) ಕೆನರಾ ಬ್ಯಾಂಕ್ ನಿಪ್ಪಾಣಿರವರಿಗೆ ಬಡ್ಡಿ ಸಮೇತ ಸಾಲ ಮರುಪಾವತಿಸಿದ ಬಗ್ಗೆ. | 1,72,335–00 |
| | 5) ಕೆನರಾ ಬ್ಯಾಂಕ್ ನಿಪ್ಪಾಣಿರವರಿಗೆ ಬಡ್ಡಿ ಸಮೇತ ಸಾಲ ಮರುಪಾವತಿಸಿದ ಬಗ್ಗೆ. | 5,34,961–00 |
| | 6) ದಿ ಸಾಂಗಲಿ ಬ್ಯಾಂಕ್ ಲಿಮಿಟೆಡ್ ನಿಪ್ಪಾಣಿರವರಿಗೆ ಬಡ್ಡಿ ಸಮೇತ ಸಾಲ ಮರುಪಾವತಿಸಿದ ಬಗ್ಗೆ. | 1,27,351–00 |
| | 7) ದಿ ಸಾಂಗಲಿ ಬ್ಯಾಂಕ್ ಲಿಮಿಟೆಡ್ ನಿಪ್ಪಾಣಿರವರಿಗೆ ಬಡ್ಡಿ ಸಮೇತ ಸಾಲ ಮರುಪಾವತಿಸಿದ ಬಗ್ಗೆ. | 1,67,800–00 |
| | 8) ದಿ ಸಾಂಗಲಿ ಬ್ಯಾಂಕ್ ಲಿಮಿಟೆಡ್ ನಿಪ್ಪಾಣಿರವರಿಗೆ ಬಡ್ಡಿ ಸಮೇತ ಸಾಲ ಮರುಪಾವತಿಸಿದ ಬಗ್ಗೆ. | 2,62,705–00 |
| | 9) ದಿ ಸಾಂಗಲಿ ಬ್ಯಾಂಕ್ ಲಿಮಿಟೆಡ್ ನಿಪ್ಪಾಣಿಯ ಎಸ್.ಬಿ.ಖಾತೆ ಸಂಖ್ಯೆ:14538 ರಲ್ಲಿ ಬ್ಯಾಂಕ್ ಚಾರ್ಜಸ್ ತುಂಬಿದ ಬಗ್ಗೆ. | 50–00 |
| | 10) ಶ್ರೀ ಹನೂಮಾನ ಕ್ರೆಡಿಟ್ ಸೌಹಾರ್ದ ಸಹಕಾರಿ ನಿಯಮಿತ ನಿಪ್ಪಾಣಿರವರಿಗೆ ಬಡ್ಡಿ ಸಮೇತ ಸಾಲ ಮರುಪಾವತಿಸಿದ ಬಗ್ಗೆ. | 59,642–00 |
| 21) | ಪ್ಲಾಟ್‌ಗಳು ಖರೀದಿಸಲು ಮಾಡಿರುವ ಮುದ್ರಾಂಕ ಮತ್ತು ಇತರೇ ಖರ್ಚುಗಳು | 1,72,830–00 |
| 22) | **ಅಡಿಗೆ ಅನಿಲ ಕುರಿತು ಮಾಡಿರುವ ಖರ್ಚು:**<br>1. ಮೈತ್ರಾಣಿ ಏಜೆನ್ಸಿ, ನಿಪ್ಪಾಣಿಯಲ್ಲಿ ಅಡುಗೆ ಅನಿಲ ಕುರಿತು ಮಾಡಿರುವ ಖರ್ಚು<br>2. ಮೆ:ಸ್ವಾಸ್ತಿಕ್ ಟ್ರೇಡರ್ಸ್ ನಿಪ್ಪಾಣಿಯಲ್ಲಿ ಅಡುಗೆ ಅನಿಲ ಕುರಿತು ಮಾಡಿರುವ ಖರ್ಚು | <br>26,071–00<br>2,518–00 |
| 23) | ರಿ.ಸ.ನಂ.215 ಯಡ್ರಾಂವಿ ಗ್ರಾಮದ ಕೃಷಿ ಜಮೀನಿಗೆ ಮಾಡಿರುವ ಖರ್ಚು | 62,834–00 |
| 24) | ಸಾಕು ಪ್ರಾಣಿಗಳ ನಿರ್ವಹಣಾ ವೆಚ್ಚದ ಬಗ್ಗೆ | 16,751–00 |
| 25) | ಸ್ಕಾಯ್‌ವೇಜ್ 2000 ಕಂಪೆನಿ ಪ್ರೈವೇಟ್ ಲಿಮಿಟೆಡ್ ಚನ್ನೈಗೆ ತುಂಬಿದ ಬಗ್ಗೆ. | 5,950–00 |
| 26) | ರೇಮೋ ಮಾರ್ಕೆಟಿಂಗ್ ಪ್ರೈವೇಟ್ ಲಿಮಿಟೆಡ್, ಅಹಮದಾಬಾದ್‌ಗೆ ತುಂಬಿದ ಬಗ್ಗೆ. | 5,000–00 |
| 27) | ಕಾನೂನು ಸಲಹೆಗಾರರಿಗೆ ಫೀ ಕೊಟ್ಟಿದ ಬಗ್ಗೆ. | 3,000–00 |
| 28) | ವೃತ್ತಿ ತೆರಿಗೆ ಪಾವತಿಸಿದ ಬಗ್ಗೆ. | 3,000–00 |
| 29) | ಆದಾಯ ತೆರಿಗೆ ಪಾವತಿಸಿದ ಬಗ್ಗೆ | 1,60,826–00 |
| 30) | ಕೆ.ಎಸ್.ಟಿ.ಅಸೋಸಿಯೇಷನ್ ಫೀ ತುಂಬಿದ ಬಗ್ಗೆ | 500–00 |
| 31) | ಮಿಕ್ಸ್ ಇದ್ದದು ಬಂಗಾರ ಚೋಕ ಮಾಡಿಸುವ ಕುರಿತು ಮಜುರಿ ಕೊಟ್ಟಿದ್ದು. | 350–00 |
| 32) | ಆದಾಯ ತೆರಿಗೆ ಇಲಾಖೆಗೆ ಲಾಟರಿ ವಿಜೇಯತಯಿಂದ ಟಿ.ಡಿ.ಎಸ್. ಪಾವತಿಸಿದ ಬಗ್ಗೆ. | 2,00,000–00 |
| 33) | 9448187967 ನೇದ್ದಕ್ಕೆ ರಿಚಾರ್ಜ ಮಾಡಿದ ಬಗ್ಗೆ. | 8,875–00 |
| | ಒಟ್ಟು | **44,77,053–00** |

**ಆಪಾದಿತ ಮತ್ತು ಅವರ ಕುಟುಂಬದವರ ಹೆಸರಿನಲ್ಲಿರುವ ಆದಾಯದ ಸಂಕ್ಷಿಪ್ತ ವಿವರಗಳು ಮತ್ತು ಮೌಲ್ಯದ ಪಟ್ಟಿ.**

| ಕ್ರ.ಸಂ. | ಆದಾಯದ ವಿವರಗಳು | ಮೌಲ್ಯ ರೂಪಾಯಿ |
|---|---|---|
| 1) | ವೇತನದಿಂದ ಬಂದ ಆದಾಯ | 9,85,124–00 |

| | | |
|---|---|---|
| 2) | ವಿವಿಧ ಬ್ಯಾಂಕ್‌ಗಳಿಂದ ಪಡೆದುಕೊಂಡ ಸಾಲ | 16,28,000–00 |
| 3) | ವಿವಿಧ ಬ್ಯಾಂಕ್‌ಗಳಲ್ಲಿ ಉಳಿತಾಯ ಖಾತೆಗಳಲ್ಲಿ ಗುಂತಾಯಿಸಿದ ಹಣದಿಂದ ಬಂದ ಬಡ್ಡಿ ಆದಾಯ | 83,976–00 |
| 4) | ಶ್ರಿಂಗಾರ ಬ್ಯೂಟಿ ಪಾರ್ಲರದಿಂದ ಬಂದ ಆದಾಯ | –– |
| 5) | ನರ್ಸರಿದಿಂದ ಬಂದ ಆದಾಯ | –– |
| 6) | ಮನೆ ಬಾಡಿಗೆಯಿಂದ ಬಂದ ಆದಾಯ | 55,000–00 |
| 7) | ಮಾರುತಿ ಜೆನ್ ಕಾರ್ ನಂ.ಜಿಎ 02 ಜೆ 0999 ನೇದ್ದನ್ನು ಮಾರಾಟದಿಂದ ಬಂದ ಆದಾಯ | –– |
| 8) | ಕೃಷಿಯಿಂದ ಬಂದ ಆದಾಯ | –– |
| 9) | ಸ್ಕಾಯವೇಜ 2000 ದಿಂದ ಬಂದ ಆದಾಯ | 20,658–00 |
| 10) | ಬಂಗಾರದ ಆಭರಣಗಳ ಮಾರಾಟದಿಂದ ಬಂದ ಆದಾಯ | –– |
| 11) | ಸಂಬಂಧಿಕರಿಂದ ಕೈಗಡ (ಸಾಲ) ತೆಗೆದುಕೊಂಡ ಬಗ್ಗೆ | 10,011–00 |
| 12) | ಕಾಣಿಕೆಯಿಂದ ಬಂದ ಆದಾಯ | –– |
| 13) | ಲಾಟರಿಯಿಂದ ಬಂದ ಆದಾಯ | 5,00,000–00 |
| 14) | ಕಾಣಿಕೆಯಿಂದ ಪಡೆದ ಕಬ್ಬಿಣದ ಗ್ರಿಲ್ | 1,29,075–00 |
| 15) | ರಾಷ್ಟ್ರೀಯ ಉಳಿತಾಯ ನಗದೀಕರಣದಿಂದ ಬಂದಿರುವ ಬಡ್ಡಿ ರಕಂ. | 34,11,844–00 |
| | ಒಟ್ಟು | **34,11,844–00** |

ತನಿಖಾಧಿಕಾರಿಯು ಸಲ್ಲಿಸಿರುವ ಅಂತಿಮ ವರದಿ ಮತ್ತು ದಾಖಲೆಗಳನ್ನು ಒಳಗೊಂಡ ಕಡತಗಳನ್ನು ಸರ್ಕಾರದ ಹಂತದಲ್ಲಿ ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು, ಮೇಲ್ಕಂಡಂತೆ ಆಪಾದಿತ ಸರ್ಕಾರಿ ಅಧಿಕಾರಿ ಶ್ರೀ ರುದ್ರಗೌಡ ಬಸನಗೌಡ ಪಾಟೀಲ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರು ದಿನಾಂಕ:1–7–91 ರಿಂದ ಶೋಧನಾ ದಾಳಿ ನಡೆಸಿದ ದಿನಾಂಕ: 29–7–2005 ರವರೆಗಿನ ಅವಧಿಗೆ ಚೆಕ್ ಅವಧಿಯೆಂದು ಈ ಅವಧಿಯಲ್ಲಿ ಆಪಾದಿತರು ಖರೀದಿಸಿದ ಒಟ್ಟು 70,80,108–00, ಆಪಾದಿತರು ತಮ್ಮ ಚೆಕ್ ಅವಧಿಯಲ್ಲಿ ಮಾಡಿರುವ ಒಟ್ಟು ಖರ್ಚು ವೆಚ್ಚ 44,77,053–00. ಆರೋಪಿತ ಅಧಿಕಾರಿಯು ತಮ್ಮ ಚೆಕ್ ಅವಧಿಯಲ್ಲಿ ಖರೀದಿಸಿದ ಆಸ್ತಿ ಖರ್ಚು ವೆಚ್ಚಗಳ ಒಟ್ಟು ಮೊತ್ತ ರೂ.1,15,57,161–00 ಗಳಾಗಿರುತ್ತವೆ. ಆಪಾದಿತ ಅಧಿಕಾರಿಯು ತಮ್ಮ ಚೆಕ್ ಅವಧಿಯಲ್ಲಿ ಹೊಂದಿರುವ ಆದಾಯದ ಒಟ್ಟು ಮೊತ್ತ ರೂ.34,11,844–00 ಗಳಾಗಿದ್ದು, ಆಪಾದಿತ ಅಧಿಕಾರಿಯು ತಮ್ಮ ಆದಾಯಕ್ಕಿಂತ ಹೆಚ್ಚಿಗೆ ಹೊಂದಿದ ಆಸ್ತಿ ಮತ್ತು ಖರ್ಚು ವೆಚ್ಚಗಳ ಒಟ್ಟು ಮೊತ್ತ 81,45,317–00 ಗಳಾಗಿರುತ್ತದೆ. ಅಂದರೆ ಆಪಾದಿತ ಸಾರ್ವಜನಿಕ ಅಧಿಕಾರಿ ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತಲೂ ಶೇ.238.75 ರಷ್ಟು ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವುದು ಕಂಡುಬರುತ್ತದೆ. ಇದಕ್ಕೆ ಆಪಾದಿತ ಬಳಿ ಯಾವುದೇ ಸಮಾದಾನಕರ ವಿವರಣೆ ಅಥವಾ ಲೆಕ್ಕ ಲಭ್ಯವಿರುವುದಿಲ್ಲ.

ಆದ್ದರಿಂದ ಶ್ರೀ ರುದ್ರಗೌಡ ಬಸನಗೌಡ ಪಾಟೀಲ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಪ್ರಸ್ತುತ (ಋಣನಿರ್ವಹಣೆ)–1, ಹುಬ್ಬಳ್ಳಿ, ಇವರು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ)ರ ಜೊತೆ ಕಲಂ 13(2)ರ ಅಡಿಯಲ್ಲಿ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಆಪಾದಿತ ಸರ್ಕಾರಿ ನೌಕರರು ತಮ್ಮ ಎಲ್ಲ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಆಸ್ತಿಯನ್ನು ಗಳಿಸಿ, ಅಪರಾಧಿಕ ದುರ್ನಡತೆ ಎಸಗಿರುವುದರಿಂದ ಸದರಿಯವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸುವುದು ಅತ್ಯವಶ್ಯಕವಾಗಿರುತ್ತದೆಂದು ಸರ್ಕಾರಕ್ಕೆ ಸ್ಪಷ್ಟವಾಗಿ ಮನವರಿಕೆಯಾಗಿರುತ್ತದೆ.

ಆಪಾಧಿತ ಅಧಿಕಾರಿಯು ಗ್ರೂಪ್ 'ಎ' ಕಿರಿಯ ವೃಂದವಾದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ನಿಯಮ 9(1) ರನ್ವಯ ಸರ್ಕಾರವು, ಆಪಾಧಿತರನ್ನು ಕೆಲಸದಿಂದ ತೆಗೆದು ಹಾಕುವ ದಂಡನೆಯನ್ನು ವಿಧಿಸಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಸಿ) ರನ್ವಯ ಸರ್ಕಾರವು ಆಪಾದಿತ ಅಧಿಕಾರಿಯನ್ನು ಲಂಚ ನಿರೋಧಕ ಕಾಯ್ದೆ, 1988ರ ಕಲಂ 13(1)(ಇ)ರ ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಗಗೊಳಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 38 ವಾತೆತ 2007, ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆಪಾದಿತ ಅಧಿಕಾರಿಯಾದ ಶ್ರೀ ರುದ್ರಗೌಡ ಬಸನಗೌಡ ಪಾಟೀಲ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ, ಇವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಲಂಚ ನಿರೋಧಕ ಕಾಯ್ದೆ 13(1)(ಇ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ಮೇಲ್ಕಂಡ ನಿಯಮಗಳನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ: 6-2-2008 ರಂದು ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 297

**ಮಹಬೂಬ್ ಖಾನ್**

ಪೀಠಾಧಿಕಾರಿ,

ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ-2)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಟಿ.ಜಿ. ನಾಗರಾಜು, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಕ್ಕನಾಯಕನಹಳ್ಳಿ ಇವರ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ನಂ. ಲಾ 193 ಪಿಪಿಇ 2003, ದಿನಾಂಕ 6-5-2004.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ ಸಿಶಾ-1/40/2007-08, ದಿನಾಂಕ 8/11-1-2008.

**ಪ್ರಸ್ತಾವನೆ :**

ಶ್ರೀ ಟಿ.ಜಿ. ನಾಗರಾಜು, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಕ್ಕನಾಯಕನಹಳ್ಳಿ ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ 6-5-2004ರ (ಕ್ರ.ಸಂ.17) ಅಧಿಸೂಚನೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು, ದಿನಾಂಕ 29-7-2004ರ ಪೂರ್ವಾಹ್ನದಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯಲ್ಲಿ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣತೆ ಹೊಂದಿರುತ್ತಾರೆ. ಇವರು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಕನ್ನಡವನ್ನು ಒಂದು ಪ್ರಥಮ ಭಾಷೆಯನ್ನಾಗಿ ಅಭ್ಯಸಿಸಿರುವ ಕಾರಣ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ವಿನಾಯಿತಿ ನೀಡಲಾಗಿದೆ. ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2004-05ನೇ ಸಾಲಿನಿಂದ 2006-07ನೇ ಸಾಲುಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ. ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಇವರ ಮೇಲೆ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲ ಆದುದರಿಂದ, ಸದರಿ ಅಧಿಕಾರಿಯವರ ಪರಿವೀಕ್ಷಣಾ ಅವಧಿಯನ್ನು 1977ರ ಕರ್ನಾಟಕ ನಾಗರೀಕ ಸೇವೆಗಳ (ಪರಿವೀಕ್ಷಣಾ) ನಿಯಮಗಳ ನಿಯಮ 5(1)(ಎ)ರ ಅನ್ವಯ ದಿನಾಂಕ 18-5-2006ರಂದು ತೃಪ್ತಿಕರವಾಗಿ ಪೂರೈಸಿರುವುದಾಗಿ ಘೋಷಿಸುವಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಮೇಲೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಕೋರಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 41 ಪಿಪಿಇ 2008, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು 1977ರ ಕರ್ನಾಟಕ ನಾಗರೀಕ ಸೇವೆಗಳ (ಪರಿವೀಕ್ಷಣಾ) ನಿಯಮಗಳ ನಿಯಮ 5(1)(ಎ)ರ ಅನ್ವಯ ಶ್ರೀ ಟಿ.ಜಿ. ನಾಗರಾಜು, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಕ್ಕನಾಯಕನಹಳ್ಳಿ ಇವರು ದಿನಾಂಕ 29-7-2006ರಂದು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 338

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಮತ್ತು ಅಭಿಯೋಗ)